# ಜಿಹಾದ್
# ಮತ್ತು
# ಭಯೋತ್ಪಾದನೆ

✍ ಇಬ್ರಾಹೀಮ್ ಸಈದ್

ಪರಮದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಭಯೋತ್ಪಾದನೆ ಎಂದರೇನು? ಅದನ್ನು ಯಾರು ಮಾಡುತ್ತಿದ್ದಾರೆ? ಕೇವಲ ಕೆಲವು ವ್ಯಕ್ತಿಗಳು, ಗುಂಪುಗಳು, ಸಂಘಟನೆಗಳು ಮಾತ್ರ ಅದನ್ನು ಮಾಡುತ್ತವೆಯೇ? ಸರಕಾರಗಳು ಭಯೋತ್ಪಾದನೆಯನ್ನು ಮಾಡುತ್ತಿಲ್ಲವೇ? ಭಾಷೆ, ಜನಾಂಗ, ಸಾಂಸ್ಕೃತಿಕ ಮೇಲ್ಮೆಯನ್ನು ವಾದಿಸುತ್ತಿರುವ ಜನಾಂಗ ಮತ್ತು ಸರಕಾರಗಳು ಇದನ್ನು ಮಾಡುತ್ತಿಲ್ಲವೇ?

ಸೆಪ್ಟೆಂಬರ್ 11, 2001ರಂದು ನ್ಯೂಯಾರ್ಕ್‌ನ ವಿಶ್ವ ವ್ಯಾಪಾರ ಕೇಂದ್ರ ಮತ್ತು ವಾಷಿಂಗ್ಟನ್‌ನ 'ಪೆಂಟಗನ್' ಎಂಬ ರಕ್ಷಣಾ ಇಲಾಖೆಯ ಕಚೇರಿಯಲ್ಲಿ ನಡೆದ ಸ್ಫೋಟಗಳ ಬಳಿಕ ಪಶ್ಚಿಮದ ರಾಷ್ಟ್ರಗಳಲ್ಲಿ ಭಯೋತ್ಪಾದನೆ ಮತ್ತು ಮುಸ್ಲಿಮರ ಮಧ್ಯೆ ವಿಶೇಷ ಸಂಬಂಧವನ್ನು ಸಾಬೀತು ಪಡಿಸಲು ಪ್ರಯತ್ನಿಸಲಾಗುತ್ತಿದೆ. ಕೆಲವರಂತು ಭಯೋತ್ಪಾದನೆಯನ್ನು ಇಸ್ಲಾಮ್ ಮತ್ತು ಅದರ ಜಿಹಾದ್ ಕಲ್ಪನೆಯೊಂದಿಗೆ ತಳಕು ಹಾಕಲು ಪ್ರಯತ್ನಿಸುತ್ತಿದ್ದಾರೆ. ಪಶ್ಚಿಮದ ಮತ್ತು ಪೂರ್ವದ ಅನೇಕ ಸರಕಾರಗಳು, ರಾಜಕಾರಣಿಗಳು ಮತ್ತು ಚಿಂತಕರು ಈ ಆರೋಪವನ್ನು ನಿರಾಕರಿಸಿದ್ದಾರೆ. ಇಸ್ಲಾಮನ್ನು ಅವರು ಶಾಂತಿ-ಸಮಾಧಾನದ ಧರ್ಮವೆಂದು ಸಾರಿದ್ದಾರೆ. ಆದರೆ ಈಗಲೂ ಕೆಲವು ಕಿಡಿಗೇಡಿ ಗುಂಪು ಮತ್ತು ಮಾಧ್ಯಮಗಳು ಈ ಸುಳ್ಳನ್ನು ಪ್ರಚಾರ ಪಡಿಸುತ್ತಿವೆ.

ಭಯೋತ್ಪಾದನೆಯ ಅರ್ಥ ತಾತ್ಪರ್ಯವು ಇನ್ನೂ ನಿರ್ಣಾಯಕವಾಗಿ ನಿರ್ಧರಿಸಲ್ಪಟ್ಟಿಲ್ಲ. ಆದರೆ ಅದರ ಪ್ರಸ್ತಾಪ ಇಂದು ಜಗತ್ತಿನೆಲ್ಲೆಡೆ ಮೊಳಗುತ್ತಿದೆ.

'ಜಿಹಾದ್ ಮತ್ತು ಭಯೋತ್ಪಾದನೆ' ಎಂಬ ಈ ಪುಸ್ತಕದಲ್ಲಿ ಈ ಎಲ್ಲ ಸಮಸ್ಯೆಗಳ ಕುರಿತು ಚರ್ಚಿಸಲಾಗಿದೆ. ಭಯೋತ್ಪಾದನೆಯ ವಿಭಿನ್ನ ರೂಪಗಳ ಬಗ್ಗೆ ಇಸ್ಲಾಮಿನ ನಿಲುವನ್ನು ಸ್ಪಷ್ಟಪಡಿಸಲಾಗಿದೆ. ಶಕ್ತಿ ಮತ್ತು ಆಯುಧಗಳ ಬಳಕೆಯ ಸಮಯ, ಸಂದರ್ಭ, ಮೇರೆ ಮತ್ತು ಶರತ್ತುಗಳನ್ನು ವಿವರಿಸಲಾಗಿದೆ.

ಇದು ಉರ್ದುವಿನಲ್ಲಿರುವ 'ದೆಹ್‌ಶತ್‌ಗರ್ದಿ ಔರ್ ಇಸ್ಲಾಮಿ ತಾಲಿಮಾತ್' ಎಂಬ ಮುಫ್ತಿ ಮುಹಮ್ಮದ್ ಮುಷ್ತಾಕ್ ಅವರ ಪುಸ್ತಕ ಮತ್ತು 'ಇಸ್ಲಾಮ್ ಔರ್ ದೆಹ್‌ಶತ್‌ಗರ್ದೀ' ಎಂಬ ಡಾ| ಸಯ್ಯದ್ ಅಬ್ದುಲ್ ಬಾರೀ ಅವರ ಪುಸ್ತಕದ ಸಾರಾಂಶವಾಗಿದೆ. ಎರಡೂ ಪುಸ್ತಕಗಳ ಮುಖ್ಯಾಂಶದ ಕನ್ನಡ ರೂಪಾಂತರವನ್ನು ಓದುಗರ ಮುಂದಿರಿಸಿದ್ದೇವೆ. ಪ್ರಸ್ತುತ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಇದು ಮುಸ್ಲಿಮ್, ಮುಸ್ಲಿಮೇತರ ಎಂಬ ಭೇದವಿಲ್ಲದೆ ಎಲ್ಲರಿಗೂ ಉಪಯುಕ್ತವಾಗುವುದೆಂದು ನಂಬಿದ್ದೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ



❖ ❖ ❖

# ಭಯೋತ್ಪಾದನೆ ಎಂದರೇನು?

## ಅರ್ಥವ್ಯಾಪ್ತಿ

ಭಯೋತ್ಪಾದನೆಯ ಆಂಗ್ಲ ಪರ್ಯಾಯ Terrorism ಎಂಬುದು Terror ಎಂಬ ಲ್ಯಾಟಿನ್ ಪದದಿಂದ ಹುಟ್ಟಿದೆ. ಅದರರ್ಥ ಭಯ-ಭೀತಗೊಳಿಸುವುದು. Terror ಭಯ-ಭೀತಿ ಉಂಟು ಮಾಡುವುದಕ್ಕೆ ಹೇಳುತ್ತಾರೆ. Terrorism ಅಥವಾ ಭಯೋತ್ಪಾದನೆಯು ಒಂದು ಪಾರಿಭಾಷಿಕ ಪದವಾಗಿದೆ. ನಿಘಂಟುಗಳಲ್ಲಿ ಅದರ ಅರ್ಥವನ್ನು ನಿರ್ದಿಷ್ಟ ಪಡಿಸಿಲ್ಲ. ಆದರೆ ಅದರ ವಿವರಣೆಗಳನ್ನು ನೀಡಲಾಗಿದೆ. ಅವುಗಳ ಪೈಕಿ ಎರಡು ವಿವರಣೆಗಳು ಮಹತ್ವಪೂರ್ಣವಾಗಿವೆ-

1) ಭಯ-ಭೀತಗೊಳಿಸುವುದು- ರಾಜಕೀಯ ದಾಳ ಮತ್ತು ಧೋರಣೆಯ ರೂಪದಲ್ಲಿ ಯಾವುದೇ ವರ್ಗವನ್ನು ಅಧೀನಗೊಳಿಸಲಿಕ್ಕೆ ಬೆದರಿಕೆ ಒಡ್ಡುವುದು.

2) ರಾಜಕೀಯ ಉದ್ದೇಶಗಳಿಗಾಗಿ ಅಮಾಯಕ ಜನರ ವಿರುದ್ಧ ಹಿಂಸೆಯನ್ನು ಬಳಸುವುದು.

ಭಯೋತ್ಪಾದನೆಯ ಒಂದು ಸಮಗ್ರ ವಿವರಣೆ ಯಾಕೆ ಆಗಿಲ್ಲ ಅಂದರೆ-

1) ಇದು ಮೂಲತಃ ಒಂದು ಪತ್ರಿಕಾ ಪದವಾಗಿದೆ. ಇದನ್ನು ಸಾಮಾನ್ಯವಾಗಿ ಮಾಧ್ಯಮಗಳಲ್ಲೇ ಬಳಸಲಾಗುತ್ತದೆ. ಕಾನೂನಿನಲ್ಲಿ ಇದರ ಬಳಕೆಯಾಗಿಲ್ಲ.

2) ಈ ಪದದ ಬಳಕೆಯ ಹಿಂದೆ ಸಾಮಾನ್ಯವಾಗಿ ರಾಜಕೀಯ ಉದ್ದೇಶಗಳಿರುತ್ತವೆ. ಆದ್ದರಿಂದ ಅದಕ್ಕೆ ತಾತ್ವಿಕ ಮತ್ತು ಕಾನೂನು ಪರವಾದ ಯಾವ ವಿವರಣೆಯನ್ನೂ ನೀಡಲಾಗುವುದಿಲ್ಲ.

Encyclopaedia of World Terrorismನಲ್ಲಿ Terrorನ ಅರ್ಥವಿದೆ. ಆದರೆ Terrorismನ ಅರ್ಥ ಅದರಲ್ಲಿಲ್ಲ.

ಈ ಪದವನ್ನು ಪ್ರಥಮ ಬಾರಿಗೆ ಫ್ರೆಂಚ್ ಕ್ರಾಂತಿಯ ವೇಳೆ ಪರಸ್ಪರ ಅಣಕಿಸಲಿಕ್ಕಾಗಿ ಬಳಸಲಾಯಿತು. ಆದ್ದರಿಂದ ಈ ವ್ಯಂಗ್ಯ ನುಡಿಗೆ ನಿಘಂಟಿನಲ್ಲಿ ಅರ್ಥ ಹುಡುಕುವುದು ವ್ಯರ್ಥ.

Encyclopaedia Britannicaದಲ್ಲಿ ಭಯೋತ್ಪಾದನೆಯನ್ನು ಈ ರೀತಿ ವಿವರಿಸಲಾಗಿದೆ-

A systematic use of terror or unpredictable violence against governments, public or individuals to attain a political objective.

ಸರಕಾರ, ಸಾರ್ವಜನಿಕರು ಅಥವಾ ವ್ಯಕ್ತಿಗಳ ವಿರುದ್ಧ ಯಾವುದಾದರೂ ರಾಜಕೀಯ ಉದ್ದೇಶದ ಈಡೇರಿಕೆಗಾಗಿ ಯೋಜನಾಬದ್ಧವಾಗಿ ಭಯಭೀತಿಯನ್ನು ಹರಡುವುದು ಅಥವಾ ಹಿಂಸೆಯ ಅನಿರೀಕ್ಷಿತ ಕ್ರಮಗಳನ್ನು ಬಳಸುವುದನ್ನು ಭಯೋತ್ಪಾದನೆ ಎನ್ನುತ್ತಾರೆ.

ಈ ವಿವರಣೆಯಲ್ಲಿ ಭಯೋತ್ಪಾದನೆಯನ್ನು ರಾಜಕೀಯ ಉದ್ದೇಶಗಳೊಂದಿಗೆ ಜೋಡಿಸಲಾಗಿದೆ. ಆದರೆ ಇದು ಸರಿಯಲ್ಲವೆಂದು ಸಾಬೀತು ಪಡಿಸಲಿಕ್ಕೆ ಈ ಕೆಳಗಿನ ಎರಡು ಉದಾಹರಣೆಗಳು ಪರ್ಯಾಪ್ತವಾಗಿವೆ-

1) ಅಮೇರಿಕದ ಓಕ್ಲಾಹಾಮ ನಗರದಲ್ಲಿ ಆದ ಸ್ಫೋಟ. ಅದರಲ್ಲಿ ಸುಮಾರು 200 ಜನರು ಜೀವಂತ ಸಮಾಧಿಯಾದರು. ಅತ್ಯಂತ ಹೇಯವಾದ ಈ ಕೃತ್ಯವನ್ನು ಅಮೇರಿಕದ ಒಬ್ಬ ಕ್ರೈಸ್ತ ಸೈನಿಕ ಎಸಗಿದ್ದನು. ಭಯ-ಭೀತಿ ಹರಡುವುದಲ್ಲದೆ ಅವನಿಗೆ ಬೇರಾವ ಉದ್ದೇಶವೂ ಇರಲಿಲ್ಲ. ಇಂತಹ ಲಕ್ಷಗಟ್ಟಲೆ ಮಂದಿ ಅಮೇರಿಕದ 30 ರಾಜ್ಯಗಳಲ್ಲಿ ಕ್ರಿಯಾಶೀಲವಾಗಿದ್ದಾರೆ. ಅವರು ಯಾವುದೇ ಉದ್ದೇಶವಿಲ್ಲದೆ ಭಯೋತ್ಪಾದನೆ ಮಾಡುತ್ತಿರುತ್ತಾರೆಂದು ತನಿಖೆಗಳಿಂದ ತಿಳಿದು ಬಂದಿದೆ. FBIಯ ವರದಿಯ ಪ್ರಕಾರ 1982-1992ರ ಮಧ್ಯೆ Puerto Ricans ಎಂಬ ಗುಂಪು 72 ಭಯೋತ್ಪಾದನಾ ದಾಳಿಗಳನ್ನು ಮಾಡಿತ್ತು. ಯಹೂದಿ ಗುಂಪುಗಳು 16 ದಾಳಿಗಳನ್ನು, ಫಿಡಲ್ ಕಾಸ್ಟ್ರೋ ವಿರೋಧಿ ಗುಂಪು 12 ದಾಳಿಗಳನ್ನೂ ಎಡಪಂಥೀಯ ಭಯೋತ್ಪಾದಕ ಗುಂಪುಗಳು 23 ದಾಳಿಗಳನ್ನೂ ಬಲಪಂಥೀಯ ಭಯೋತ್ಪಾದಕರು 6 ದಾಳಿಗಳನ್ನೂ ಮಾಡಿದ್ದರು.

2) ಜಪಾನ್‌ನ 'ರೆಡ್ ಆರ್ಮಿ' ಎಂಬುದು ಅಲ್ಲಿ 1945ರಲ್ಲಿ ನಡೆದ ಅಮೇರಿಕಾದ ಅಣುಬಾಂಬ್ ಆಕ್ರಮಣದಲ್ಲಿ ಮಡಿದ 72 ಸಾವಿರ ನಾಗರಿಕರ ಸೇಡು ತೀರಿಸಲಿಕ್ಕಾಗಿ ಹುಟ್ಟಿಕೊಂಡಂತಹ ಸಂಘಟನೆಯಾಗಿದೆ. 2001ರ ಸೆಪ್ಟೆಂಬರ್ 11ರಂದು ನ್ಯೂಯಾರ್ಕ್‌ನ ಅವಳಿ ಗೋಪುರಗಳು ಮತ್ತು ವಾಷಿಂಗ್ಟನ್‌ನ ಪೆಂಟಗನ್‌ನ ಮೇಲೆ ನಡೆದ ದಾಳಿಯಲ್ಲಿ ಮುಖ್ಯ ಆರೋಪ ಉಸಾಮಾ ಬಿನ್ ಲಾದನ್‌ನ ಮೇಲೆ ಹೊರಿಸಲಾಯಿತಾದರೂ FBI ಮತ್ತಿತರ ತನಿಖಾ ಸಂಸ್ಥೆಗಳು ಇತರರ ಕೈವಾಡದ ಕುರಿತೂ ಪರಿಶೀಲಿಸುತ್ತಿದ್ದವು. ರೆಡ್ ಆರ್ಮಿಯೂ ಅದರಲ್ಲಿ ಶಾಮೀಲಾಗಿದ್ದರೆ ಆಶ್ಚರ್ಯವಿಲ್ಲ. ಇಸ್ರೇಲಿಗಳ ನಂತರ ಇಷ್ಟು ವ್ಯವಸ್ಥಿತ ದಾಳಿಯನ್ನು ಸಂಘಟಿಸುವ ಸಾಮರ್ಥ್ಯ ಯಾರಿಗಾದರೂ ಇದ್ದರೆ ಅದು ಜಪಾನ್‌ನ ರೆಡ್ ಆರ್ಮಿಗೆ ಮಾತ್ರವೆಂದು ಅನೇಕ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ.

## ಸರಕಾರೀ ನಿಲುವು

ಈ ಕುರಿತು ಸರಕಾರಗಳ ನಿಲುವು ಕೂಡಾ ಸ್ಪಷ್ಟವಾಗಿಲ್ಲ. ಬಹುಶಃ ಸರಕಾರಗಳು ತಮ್ಮ ನಿಲುವನ್ನು ಸ್ಪಷ್ಟಪಡಿಸ ಬಯಸುವುದಿಲ್ಲ. 1977ರಲ್ಲಿ ಭಯೋತ್ಪಾದನೆಯ ವಿಷಯದಲ್ಲಿ ಐರೋಪ್ಯ ರಾಷ್ಟ್ರಗಳ ಒಂದು ಸಮ್ಮೇಳನ ಜರಗಿತು. ಆದರೆ ಅದರಲ್ಲಿ ಸ್ಪಷ್ಟವಾಗಿ ಭಯೋತ್ಪಾದನೆಯನ್ನು ವಿವರಿಸಲಾಗಿಲ್ಲ. ಕೇವಲ ಕೆಲವು ಅಪರಾಧಗಳನ್ನು ಪಟ್ಟಿ ಮಾಡಿ ಅವುಗಳನ್ನು ಎಸಗುವವರು ಭಯೋತ್ಪಾದಕರೆನಿಸುವರು ಎಂದು ಹೇಳಲಾಯಿತು.

1985ರಲ್ಲಿ ಪಶ್ಚಿಮ ಜರ್ಮನಿಯ ಸರಕಾರವು ಭಯೋತ್ಪಾದನೆಯನ್ನು ಹೀಗೆ ವಿವರಿಸಿತು: "ರಾಜಕೀಯ ಧ್ಯೇಯ ಸಾಧನೆಗಾಗಿ ಹಿಂಸಾತ್ಮಕ ಕೃತ್ಯಗಳನ್ನೆಸಗುವುದು. ಅದರಲ್ಲಿ ಜನರ ಪ್ರಾಣ-ಸೊತ್ತುಗಳ ಮೇಲೆ ದಾಳಿ, ಕೊಲೆ, ವಂಶ ನಿರ್ಮೂಲನದ ಯತ್ನ, ಒತ್ತೆಸೆರೆಯಿರಿಸುವುದು ಮತ್ತು ಬಾಂಬ್ ಸ್ಫೋಟ ಇತ್ಯಾದಿ ಸೇರಿದೆ."

1980ರಲ್ಲಿ ಅಮೇರಿಕದ CIA ಭಯೋತ್ಪಾದನೆಯನ್ನು ಹೀಗೆ ವಿವರಿಸಿತು:

The threat or use of violence for political purposes by individuals or groups, whether to or in opposition to established government authority. When such actions are intended to shock or intimidate a long group wider than the immediate victims.

(Encyclopaedia of World Terrorism)

ಒಂದು ಸರಕಾರಿ ಸಂಸ್ಥೆಗೆ ಅಥವಾ ಅದಕ್ಕೆ ವಿರುದ್ಧವಾಗಿ ವ್ಯಕ್ತಿಗಳು ಅಥವಾ ಗುಂಪುಗಳು ರಾಜಕೀಯ ಉದ್ದೇಶಗಳಿಗಾಗಿ ಹಿಂಸೆಯ ಬೆದರಿಕೆ ಹಾಕುವುದು ಅಥವಾ ಅದನ್ನು ಬಳಸುವುದು. ಆ ಕ್ರಿಯೆಗಳ ಉದ್ದೇಶವು ಅದರ ನೇರ ಗುರಿಗಿಂತ ದೊಡ್ಡದಾದ ಒಂದು ವರ್ಗದ ಜನರನ್ನು ಭಯಭೀತಗೊಳಿಸುವುದಾಗಿರುತ್ತದೆ.

ಬ್ರಿಟಿಷ್ ಸರಕಾರವು 1974ರಲ್ಲಿ ಭಯೋತ್ಪಾದನೆಯನ್ನು ಹೀಗೆ ವಿವರಿಸಿತ್ತು:

"For the purposes of the legislation, terrorism is the use of violence for political ends and includes any use of violence for the purposes of putting the public or any section of public in fear."

ರಾಜಕೀಯ ಧ್ಯೇಯಗಳಿಗಾಗಿ ಹಿಂಸೆಯನ್ನು ಬಳಸುವ ಮೂಲಕ ಜನರನ್ನು ಅಥವಾ ಅವರ ಒಂದು ವರ್ಗವನ್ನು ಭಯಭೀತಗೊಳಿಸುವುದನ್ನು ಕಾನೂನಿನ ಭಾಷೆಯಲ್ಲಿ ಭಯೋತ್ಪಾದನೆ ಎನ್ನಲಾಗುತ್ತದೆ.

ಇಂತಹ ವಿವರಣೆಗಳನ್ನು ಇನ್ನೂ ಕೆಲವು ದೇಶಗಳು ನೀಡಿವೆ. ಈ ವಿವರಣೆಗಳಿಂದ ತಿಳಿದು ಬರುವುದೇನೆಂದರೆ ರಾಜಕೀಯ ಉದ್ದೇಶಗಳಿಗಾಗಿ ಭಯೋತ್ಪಾದನೆಯನ್ನು ಬಳಸುವುದರ ಬಗ್ಗೆ ಮಾತ್ರ ಸರಕಾರಗಳು ಚಿಂತಿತವಾಗಿರಬೇಕು. ಭಯೋತ್ಪಾದನೆಯ ಇತರ ಪ್ರಕಾರಗಳನ್ನು ಕಡೆಗಣಿಸಬೇಕು.

Encyclopedia of World Terrorismನಲ್ಲಿ ಸ್ವತಃ ಭಯೋತ್ಪಾದಕರ ಅಭಿಪ್ರಾಯವನ್ನು ಹೀಗೆ ವಿವರಿಸಲಾಗಿದೆ-

It is clear that so-called terrorism is the logical and just resistance of the people against state terrorism, capitalism, racim, sexism and imperialism.

ಯಾವುದನ್ನು ಭಯೋತ್ಪಾದನೆ ಎನ್ನಲಾಗುತ್ತದೋ ಅದು ಸರಕಾರೀ ಭಯೋತ್ಪಾದನೆ, ಬಂಡವಾಳಶಾಹಿತ್ವ, ಜನಾಂಗೀಯವಾದ, ಮುಕ್ತ ಲೈಂಗಿಕತೆ ಮತ್ತು ಸಾಮ್ರಾಜ್ಯಶಾಹಿತ್ವದ ವಿರುದ್ಧ ನಡೆಸುವ ತಾತ್ವಿಕ ಮತ್ತು ನ್ಯಾಯಯುತವಾದ ಪ್ರತಿಭಟನೆಯಾಗಿದೆ.

ಭಯೋತ್ಪಾದನೆಯ ಸಮಗ್ರ ಮತ್ತು ನಿರ್ಣಾಯಕ ವಿವರಣೆ ಇನ್ನೂ ಆಗಿಲ್ಲ ವೆಂಬುದನ್ನು ಪ್ರಸ್ತುತ Encyclopaediaದಲ್ಲಿ ಒಪ್ಪಿಕೊಳ್ಳಲಾಗಿದೆ. ಇದಕ್ಕೆ ಮುಂಚಿತವಾಗಿ ಕೆಲವು ಮುಖ್ಯ ಪ್ರಶ್ನೆಗಳ ಉತ್ತರ ಕಂಡು ಕೊಳ್ಳಬೇಕಾಗಿದೆ. ಉದಾ: ಒಂದು ಶಕ್ತಿಯು ಯಾವುದಾದರೂ ಪ್ರದೇಶವನ್ನು ಬಲವಂತವಾಗಿ ವಶಪಡಿಸಿಕೊಳ್ಳುತ್ತದೆ. ಆ ಶಕ್ತಿಯ ವಿರುದ್ಧ ಆ ಪ್ರದೇಶದ ಜನರು ಸಶಸ್ತ್ರ ಹೋರಾಟ ಮಾಡಿದರೆ ಅದನ್ನು ಏನೆಂದು ಪರಿಗಣಿಸಬೇಕು. ಉದಾ: ಫೆಲೆಸ್ತೀನ್‌ನ ಮೇಲೆ ಇಸ್ರೇಲಿನ ಆಧಿಪತ್ಯವು ಸಂಪೂರ್ಣ ಅನ್ಯಾಯದ್ದಾಗಿದೆ. ಫೆಲೆಸ್ತೀನಿಯರು ಇಸ್ರೇಲಿಯರನ್ನು ಒತ್ತೆಸೆರೆ ಇರಿಸುವುದನ್ನು, ಬಾಂಬ್ ಸ್ಫೋಟ ನಡೆಸುವುದನ್ನು ಅಥವಾ ಆತ್ಮಾಹುತಿ ದಾಳಿಗಳನ್ನು ಮಾಡುವುದನ್ನು ಭಯೋತ್ಪಾದನೆ ಎನ್ನಬಹುದೇ? ಇಸ್ರೇಲಿಗಳು ನಡೆಸುವ ನಿರಂತರ ಆಕ್ರಮಣಗಳು ಮತ್ತು ದೌರ್ಜನ್ಯ ಗಳನ್ನು ಭಯೋತ್ಪಾದನೆ ಎಂದು ಪರಿಗಣಿಸಲಾಗದೆ? ಇದೇ ರೀತಿ ಅಮೇರಿಕವು ವಿಯೆಟ್ನಾಮ್‌ನಲ್ಲಿ 33 ಲಕ್ಷ ಮಂದಿಯನ್ನು ಮರಣಕೂಪಕ್ಕೆ ತಳ್ಳಿತ್ತು. ಅವರು ಅಮೇರಿಕದ ವಿರುದ್ಧ ಯಾವುದಾದರೂ ಸೇಡಿನ ಕ್ರಮ ಕೈಗೊಂಡರೆ ಅದನ್ನು ಭಯೋತ್ಪಾದನೆ ಎನ್ನಬಹುದೆ? ಅಮೇರಿಕದ ನಾಗರಿಕರ ಹತ್ಯೆಯನ್ನು ಏನೆಂದು ಪರಿಗಣಿಸಬೇಕು?

ಅಮೇರಿಕವು ಇರಾನ್‌ನ ವಿರುದ್ಧ ಮೂರು ಸಲ ಬಾಂಬ್ ವರ್ಷಿಸಿತ್ತು. ಅದರ ಸಂಸತ್ ಭವನವನ್ನು ಧ್ವಂಸಗೊಳಿಸಿತ್ತು. ಒಮ್ಮೆ ಇರಾನಿನ ಒಂದು ಯಾತ್ರಿಕ ವಿಮಾನವನ್ನು ಹೊಡೆದುರುಳಿಸಿತ್ತು. ಅದರಲ್ಲಿ ಐನೂರು ಪ್ರಯಾಣಿಕರಿದ್ದರು. ಅದನ್ನು ಭಯೋತ್ಪಾದನೆ ಎನ್ನಲಾಗದೆ? ಅದೇ ರೀತಿ ಅಮೇರಿಕ ಕೇವಲ ಸಂಶಯದ ಆಧಾರದಲ್ಲಿ ಅನೇಕ ರಾಷ್ಟ್ರಗಳ ಮೇಲೆ ದಾಳಿ ಮಾಡಿದೆ. ಇದನ್ನೆಲ್ಲಾ ಭಯೋತ್ಪಾದನೆ ಎಂದು ಪರಿಗಣಿಸಲಾಗದೆ? ಇದಲ್ಲದೆ ಅನೇಕ ದೇಶಗಳ ಸ್ವಾತಂತ್ರ್ಯ ಹೋರಾಟಗಾರರು ಮೊದಮೊದಲು ಭಯೋತ್ಪಾದಕರೆಂದು ಕರೆಸಿಕೊಳ್ಳುತ್ತಾರೆ. ಅನಂತರ ಅವರೇ ದೇಶದ ಹೀರೋಗಳಾಗಿ ಮಾರ್ಪಡುತ್ತಾರೆ. ಇದನ್ನೆಲ್ಲಾ ಯಾವ ವರ್ಗಕ್ಕೆ ಸೇರಿಸಬೇಕು?

ಒಟ್ಟಿನಲ್ಲಿ, ಈ ಚರ್ಚೆಯಿಂದ ಭಯೋತ್ಪಾದನೆಯ ವಿಭಿನ್ನ ರೂಪಗಳು ಮುಂದೆ ಬಂದುವು. ಅದು ವೈಯಕ್ತಿಕವೂ ಆಗಿರಬಹುದು. ಅದಕ್ಕೆ ಉದಾಹರಣೆ ಈ ಹಿಂದೆ ಪ್ರಸ್ತಾಪಿಸಿದ ಓಕ್ಲಾಹಾಮದ ಘಟನೆಯಾಗಿದೆ ಅಥವಾ ಫೆಲೆಸ್ತೀನ್‌ನ ಖಲೀಲುಲ್ಲಾಹ್ ಮಸೀದಿಯಲ್ಲಿ ಯಹೂದಿಗಳು ನಮಾಝ್ ಮಾಡುವವರ ಮೇಲೆ ಗುಂಡು ಹಾರಿಸಿ ದ್ದಾಗಿದೆ. ನಮ್ಮ ರಾಜ್ಯದಲ್ಲಿ ದಂತಚೋರ ವೀರಪ್ಪನ್ ಕೂಡಾ ಇದೇ ವರ್ಗಕ್ಕೆ ಸೇರುತ್ತಾನೆ. ಆತ ನೂರಾರು ವ್ಯಕ್ತಿಗಳನ್ನು ಈಗಾಗಲೇ ಕೊಂದಿದ್ದಾನೆ. ಚೆಚ್ನಿಯಾದ ವಿರುದ್ಧ ರಶ್ಯಾದ ಭಯೋತ್ಪಾದನೆ, ಅರಾಕಾನ್ ಮುಸ್ಲಿಮರ ವಿರುದ್ಧ ಬರ್ಮಾದ ಲಷ್ಕರಿ ಸರಕಾರದ ಭಯೋತ್ಪಾದನೆ ಇತ್ಯಾದಿ ಸರಕಾರಿ ಭಯೋತ್ಪಾದನೆಯ ನಿದರ್ಶನಗಳಾಗಿವೆ. ಕೆಲವೊಮ್ಮೆ ಅದು ಜನಾಂಗೀಯವಾಗಿರುತ್ತದೆ. ಫಿಜಿಯಲ್ಲಿ ಭಾರತೀಯ ಮೂಲದ ನಾಗರಿಕರ ವಿರುದ್ಧ ಸ್ಥಳೀಯರ ಅತಿರೇಕಗಳು, ಆಸ್ಟ್ರೇಲಿಯಾದಲ್ಲಿ ಆರ್ಯನ್ ಜನಾಂಗಕ್ಕೆ ಸೇರದ ಅಲ್ಲಿನ

ಮೂಲ ನಿವಾಸಿಗಳ ವಿರುದ್ಧ ನಡೆಯುವ ಹಿಂಸೆ ಅಥವಾ ಫೆಲೆಸ್ತೀನ್‌ನಲ್ಲಿ ಸ್ಥಳೀಯ ಅರಬರ ಮತ್ತು ಕ್ರೈಸ್ತರ ವಿರುದ್ಧ ಇಸ್ರೇಲಿಗಳ ದೌರ್ಜನ್ಯಗಳು ಇದರ ಉದಾಹರಣೆಗಳಾಗಿವೆ.

ಭಯೋತ್ಪಾದನೆಯ ಇನ್ನೊಂದು ರೂಪ ಧಾರ್ಮಿಕ ಭಿನ್ನತೆಯ ಆಧಾರದಲ್ಲಾಗುತ್ತದೆ. ಉದಾಹರಣೆಗೆ ಬೋಸ್ನಿಯಾದ ವಿರುದ್ಧ ಸರ್ಬಿಯಾದ ಕ್ರೈಸ್ತರು ನಡೆಸುವ ವಂಶ ನಿರ್ಮೂಲನದ ಯತ್ನ. ಭಯೋತ್ಪಾದನೆಯು ವರ್ಣಭೇದದ ಆಧಾರದಲ್ಲಿಯೂ ನಡೆಯುತ್ತದೆ. ಅಮೇರಿಕದಲ್ಲಿ ಅಲ್ಲಿನ ಕರಿಯರ ಮೇಲೆ ಬಿಳಿಯರು ನಡೆಸುವ ದೌರ್ಜನ್ಯಗಳು ಕೂಡಾ ಅದೇ ಸಾಲಿಗೆ ಸೇರಿವೆ.

ಭಯೋತ್ಪಾದನೆಯು ಎರಡು ದೇಶಗಳ ಮಧ್ಯೆಯೂ ನಡೆಯಬಹುದು. ಐರ್ಲೆಂಡ್ ಮತ್ತು ಬ್ರಿಟನ್ ಹಾಗೂ ವಿಯೆಟ್ನಾಮ್ ಮತ್ತು ಅಮೇರಿಕ ಇದಕ್ಕೆ ಉದಾಹರಣೆಯಾಗಿದೆ. ಇದು ಒಂದೇ ಧರ್ಮದ ಎರಡು ಪಂಥಗಳ ಮಧ್ಯೆಯೂ ಆಗಬಹುದು. ಐರ್ಲೆಂಡ್‌ನ ಕ್ಯಾಥೋಲಿಕ್ ಮತ್ತು ಪ್ರೊಟೆಸ್ಟೆಂಟ್ ಪಂಥಗಳ ಮಧ್ಯೆ. ಇದು ಆಂತರಿಕವೂ ಆಗಿರಬಹುದು, ಯಾವುದೇ ಸರಕಾರದ ವಿರುದ್ಧ ಅದರ ನಾಗರಿಕರ ಸಶಸ್ತ್ರ ಹೋರಾಟದಂತೆ.

ಭಯೋತ್ಪಾದನೆಯ ಒಂದು ದೊಡ್ಡ ಉದ್ದೇಶ ವೈರಿಯನ್ನು ಮನೋವೈಜ್ಞಾನಿಕವಾಗಿ ಭಯಗ್ರಸ್ತಗೊಳಿಸಿ ಹೇಡಿಯಾಗಿ ಮಾಡುವುದಾಗಿದೆ. ಭಯೋತ್ಪಾದಕ ಯಾವುದೇ ರಾಜಕೀಯ ಉದ್ದೇಶ ಸಾಧನೆಗೆ ನೇರವಾಗಿ ಪ್ರಯತ್ನಿಸುವುದಿಲ್ಲ. ಆತ ಜನರ ಗಮನವನ್ನು ತನ್ನ ಉದ್ದೇಶಗಳತ್ತ ಹರಿಸುವ ಪ್ರಯತ್ನ ನಡೆಸುತ್ತಾನೆ. ಭಯೋತ್ಪಾದಕನ ತಕ್ಷಣದ ಉದ್ದೇಶ ಭಯೋತ್ಪಾದನೆಯ ಮಾರ್ಗವನ್ನು ಅವಲಂಬಿಸಿ, ಜನರಲ್ಲಿ ಒಂದು ರೀತಿಯ ಮನೋವೈಜ್ಞಾನಿಕ ಪ್ರತಿಕ್ರಿಯೆ ಉಂಟಾಗುವಂತೆ ಮಾಡಿ, ಅವರ ರಾಜಕೀಯ ದಿಕ್ಕು ಮತ್ತು ಕಾರ್ಯನೀತಿಯನ್ನು ಬದಲಿಸುವುದೇ ಆಗಿದೆ. ಭಯೋತ್ಪಾದಕರು ಸಾಮಾನ್ಯವಾಗಿ ವೃತ್ತಿಯಿಂದ ಸೈನಿಕರಾಗಿರುವುದಿಲ್ಲ. ಅವರು ತಾತ್ಕಾಲಿಕವಾಗಿ ಈ ವರ್ತುಲಕ್ಕೆ ಸೇರುತ್ತಾರೆ.

ಭಯೋತ್ಪಾದನೆಯಲ್ಲಿ ಎಲ್ಲ ಕೆಲಸಗಳೂ ಅಪರಾಧ ಕೃತ್ಯಗಳಾಗಿರುತ್ತವೆ. ಹಿಂಸೆ ಮತ್ತು ಹಿಂಸೆಯ ಬೆದರಿಕೆ ಇವುಗಳಲ್ಲಿ ಪ್ರಮುಖವಾಗಿರುತ್ತವೆ. ಒಂದು ಸಂಘಟಿತ ಗುಂಪು ಖಚಿತ ತೀರ್ಮಾನ ಮತ್ತು ಇರಾದೆಯೊಂದಿಗೆ ಇಂತಹ ಕೃತ್ಯಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತದೆ. ತನ್ಮೂಲಕ ಅದು ಭಯದ ವಾತಾವರಣವನ್ನು ಸೃಷ್ಟಿಸಿ, ಅಧಿಕಾರಿ ವರ್ಗವನ್ನು ಶಿಥಿಲಗೊಳಿಸಿ ಜನರನ್ನು ದಿಙ್ಮೂಢರಾಗಿ ಮಾಡುತ್ತದೆ. ಭಯೋತ್ಪಾದನೆಗೆ ನೇರವಾಗಿ ಬಲಿಯಾಗುವವರು ಅಮಾಯಕ, ನಿರಾಯುಧ ಮತ್ತು ಅರಕ್ಷಿತ ಜನರಾಗಿರುತ್ತಾರೆ. ಭಯೋತ್ಪಾದನೆಯು ಅನಿರೀಕ್ಷಿತ ಹಿಂಸಾತ್ಮಕ ದಾಳಿಯಾಗಿದೆ. ಅದಕ್ಕೆ ಸ್ಪಷ್ಟವಾದ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಉದ್ದೇಶವಿರುತ್ತದೆ. ಕೆಲವೊಮ್ಮೆ ಅದು ಸೀಮಿತ ವೈಯಕ್ತಿಕ ಉದ್ದೇಶವನ್ನು ಹೊಂದಿರುತ್ತದೆ. ಇನ್ನು ಕೆಲವೊಮ್ಮೆ ಅದು ಕೆಲವು ನಿರ್ದಿಷ್ಟ ತತ್ವ ಮತ್ತು ಸಿದ್ಧಾಂತಗಳನ್ನು ಬಲಪಡಿಸಲಿಕ್ಕಾಗಿರುತ್ತದೆ. ಮತ್ತೆ ಕೆಲವೊಮ್ಮೆ ಜನರ ಅಂತರಾತ್ಮವನ್ನು ನಿರ್ದಿಷ್ಟ ಉದ್ದೇಶಗಳಿಗಾಗಿ ಬಡಿದೆಬ್ಬಿಸುವುದು ಹಾಗೂ ಹಣ ಮತ್ತು ಅಧಿಕಾರದ

ಮೂಲಗಳನ್ನು ವಶದಲ್ಲಿರಿಸಿಕೊಂಡಿರುವ ಜನರನ್ನು ಸಂಕಷ್ಟಕ್ಕೀಡು ಮಾಡುವುದು ಅದರ ಉದ್ದೇಶವಾಗಿರುತ್ತದೆ. ರಾಜಕೀಯ ಸಿದ್ಧಾಂತಗಳು, ರಾಷ್ಟ್ರೀಯ ಮಹತ್ವಾಕಾಂಕ್ಷೆಗಳು, ಜನಾಂಗೀಯವಾದ ಇತ್ಯಾದಿಗಳು ಭಯೋತ್ಪಾದನೆಯ ಕಾರಣಗಳಾಗಿವೆ.

ಭಯೋತ್ಪಾದನೆಯು ಜಗತ್ತಿನ ಬೇರೆಬೇರೆ ಭಾಗಗಳಲ್ಲಿ ವಿಭಿನ್ನ ಉದ್ದೇಶಗಳಿಗಾಗಿ ತಲೆಯೆತ್ತಿವೆ. ಭಾರತದಲ್ಲಿ ಪ್ರಥಮ ಸ್ವಾತಂತ್ರ್ಯ ಸಮರ 1857ರಲ್ಲಾಯಿತು. ಅದರಲ್ಲಿ ಆಂಗ್ಲರ ವಿರುದ್ಧ ಹೋರಾಡಿದವರು ಸೇಡಿನ ಆವೇಶದಲ್ಲಿ ಆಂಗ್ಲರ ವೃದ್ಧರು, ಮಹಿಳೆಯರು ಮತ್ತು ಮಕ್ಕಳನ್ನೂ ಬಿಟ್ಟಿರಲಿಲ್ಲ. ಭಾರತೀಯ ಇತಿಹಾಸಕಾರರು ಕೂಡಾ ಇದನ್ನು ಖಂಡಿಸಿದ್ದಾರೆ.

ಹಿಂದಿನ ಕಾಲದಲ್ಲಿ ವಿದೇಶಿ ಆಧಿಪತ್ಯದ ವಿರುದ್ಧ ಆ ದೇಶದ ಜನರ ಸಶಸ್ತ್ರ ದಂಗೆಯು ಭಯೋತ್ಪಾದನೆಯ ರೂಪ ತಾಳುತ್ತಿತ್ತು. ಆದರೆ ಇಂದಿನ ಯುಗದಲ್ಲಿ ಭಯೋತ್ಪಾದನೆಯು ಯಾವುದೇ ಸರಕಾರದ ವಿರುದ್ಧ ಹಿಂಸೆಯನ್ನು ರಹಸ್ಯವಾಗಿ ಉಪಯೋಗಿಸುವುದರಿಂದ ಆ ಅರ್ಥದಲ್ಲಿ ಅದು ಬಹಿರಂಗ ದಂಗೆಗಿಂತ ಭಿನ್ನವಾಗಿದೆ. 20ನೆಯ ಶತಮಾನದಲ್ಲಿ ಅದನ್ನು ಕ್ರಾಂತಿ ಮತ್ತು ದಂಗೆಯ ಒಂದು ಜನಪ್ರಿಯ ಸಾಧನವೆಂಬ ನೆಲೆಯಲ್ಲಿ ಹಿಂಸೆಯ ತತ್ವಶಾಸ್ತ್ರದಲ್ಲಿ ನಂಬಿಕೆಯಿಟ್ಟ ಹಲವು ಸೈದ್ಧಾಂತಿಕ ಆಂದೋಲನಗಳು ಅಳವಡಿಸಿಕೊಂಡವು. ಕಾಲಕಳೆದಂತೆ ಭಯೋತ್ಪಾದನೆಯ ರೂಪದಲ್ಲಿ ಬಹಳಷ್ಟು ಮಾರ್ಪಾಟುಗಳಾಗಿವೆ. ಒಂದೊಮ್ಮೆ ಇದು ತಮ್ಮನ್ನು ಕ್ರಾಂತಿಕಾರಿಯೆಂದು ಸಾರುವ ವ್ಯಕ್ತಿಗಳ ಕಾರ್ಯಶೈಲಿಯಾಗಿತ್ತು. ಅದು ಯಾವುದಾದರೂ ವಿಶಿಷ್ಟ ತತ್ವಶಾಸ್ತ್ರ ಅಥವಾ ಸಿದ್ಧಾಂತಕ್ಕಾಗಿ ಗೊರಿಲ್ಲಾ ತರದ ಹೋರಾಟದ ರೂಪದಲ್ಲಿ ಕಂಡು ಬರುತ್ತಿತ್ತು.

ಇಂಡಿಯನ್ ನ್ಯಾಶನಲ್ ಸೆಕ್ಯೂರಿಟಿ ಗಾರ್ಡ್ ಏಕ್ಟ್ 1986ರ ಪ್ರಕಾರ ಭಯೋತ್ಪಾದನೆಗೆ ಈ ವಿವರಣೆ ನೀಡಲಾಗಿದೆ-

"ಭಯೋತ್ಪಾದಕನೆಂದರೆ ಕಾನೂನು ರೀತ್ಯಾ ಸ್ಥಾಪಿತವಾದ ಒಂದು ಸರಕಾರವನ್ನು ಬೆದರಿಸಲಿಕ್ಕಾಗಿ, ಅದನ್ನು ವಜಾಗೊಳಿಸಲಿಕ್ಕಾಗಿ ಸಾರ್ವಜನಿಕರು ಅಥವಾ ಅದರ ಒಂದು ವರ್ಗದಲ್ಲಿ ಭಯಭೀತಿಯನ್ನು ಉಂಟು ಮಾಡಲಿಕ್ಕಾಗಿ ಬಾಂಬ್, ಡೈನಮ್ಯಾಟ್, ಸ್ಫೋಟಕ ಸಾಧನಗಳು, ಸುಡುಮದ್ದುಗಳು, ಬಂದೂಕು ಅಥವಾ ಇತರ ಪ್ರಾಣಾಂತಿಕ ಆಯುಧಗಳು, ವಿಷಾನಿಲ ಅಥವಾ ಇತರ ವಿನಾಶಕಾರಿ ಅಸ್ತ್ರವನ್ನು ಬಳಸಿ ಕೆಲವರನ್ನು ಕೊಂದು ಇನ್ನು ಕೆಲವರನ್ನು ಗಾಯಗೊಳಿಸುವ ಅಥವಾ ಸೊತ್ತು-ವಿತ್ತಗಳನ್ನು ನಾಶ ಮಾಡುವ ಅಥವಾ ದೇಶದ ಸಂಪರ್ಕ ವ್ಯವಸ್ಥೆಯನ್ನು ನುಚ್ಚುನೂರುಗೊಳಿಸುವವನು."

ತಾನು ಯೋಚಿಸುವಂತೆಯೇ ಇತರರೂ ಯೋಚಿಸುವಂತಹ ಸಾಮಾನ್ಯ ವಾತಾವರಣವನ್ನು ಸೃಷ್ಟಿಸಿ ಇತರರು ತಮ್ಮನ್ನು ಅನುಸರಿಸುವುದು ಅನಿವಾರ್ಯವಾಗುವ ಪರಿಸ್ಥಿತಿಯನ್ನು ಭಯೋತ್ಪಾದಕನು ನಿರ್ಮಿಸುತ್ತಾನೆ. ಬಾಬರಿ ಮಸೀದಿ ಧ್ವಂಸಕ್ಕೆ ಮೊದಲು ಸಂಘ ಪರಿವಾರವು ಸರಕಾರದ ಪರೋಕ್ಷ ಸಹಾಯದಿಂದ ಭಯೋತ್ಪಾದನೆಯ ಯಶಸ್ವಿ

ಪ್ರಯೋಗ ಮಾಡಿತು. ಇತಿಹಾಸದ ಅತ್ಯಂತ ಸುಳ್ಳು ಚಿತ್ರವನ್ನು ವಾಸ್ತವಿಕತೆಯ ರೂಪದಲ್ಲಿ ಮುಂದಿಟ್ಟು ಲಕ್ಷಗಟ್ಟಲೆ ಮನುಷ್ಯರನ್ನು ಅದು ವಿಧ್ವಂಸಕ ಕೃತ್ಯಗಳಿಗೆ ಪ್ರೇರೇಪಿಸಿತು. ಇಂದು ಭಯೋತ್ಪಾದನೆಯು ದಯೆ ದಾಕ್ಷಿಣ್ಯವಿಲ್ಲದ, ಕೊಲೆಗಡುಕ, ಅಪಾಯಕಾರಿ ಮತ್ತು ಧೂರ್ತತನದ ವಿಧಾನಗಳನ್ನು ಅಳವಡಿಸಿಕೊಂಡಿದೆ.

ಆಧುನಿಕ ಭಯೋತ್ಪಾದಕರು ಹೆಚ್ಚಾಗಿ ಮೇಲ್ಮಧ್ಯಮ ವರ್ಗಕ್ಕೆ (Upper Middle Class) ಸೇರಿದವರಾಗಿದ್ದಾರೆ. ಕೆಲವರು ಶ್ರೀಮಂತರೂ ಇದ್ದಾರೆ. ಹೆಚ್ಚಿನಂಶ ಯುವಕರೇ ಈ ಕೆಲಸಕ್ಕೆ ಇಳಿಯುತ್ತಾರೆ. ಕೆಲವೊಮ್ಮೆ ನಿರಾಶರೂ ಅವಕಾಶವಂಚಿತರೂ ಆದ ಯುವಕರು, ಯಾವುದಾದರೂ ಅಪಘಾತ ಅಥವಾ ದುಃಖದಾಯಕ ಘಟನೆಗೆ ಗುರಿಯಾದ ಯುವಕರು ಈ ಹಾದಿಯನ್ನು ತುಳಿಯುತ್ತಾರೆ. 20ನೆಯ ಶತಮಾನದ ಇತಿಹಾಸದಲ್ಲಿ ಗೊರಿಲ್ಲಾ ಯುದ್ಧ ಮತ್ತು ರಹಸ್ಯ ವಿಧ್ವಂಸಕ ಕೃತ್ಯಗಳ ಪ್ರಥಮ ಅನುಭವವನ್ನು ಓರ್ವ ಪಾಶ್ಚಾತ್ಯ ಯುವಕ ಟಿ.ಇ. ಲಾರೆನ್ಸ್ ಪಡೆದನು. ಆತ ಲಾರೆನ್ಸ್ ಆಫ್ ಅರೇಬಿಯಾದ ಹೆಸರಲ್ಲಿ ಪ್ರಖ್ಯಾತನಾದ. ಆತ ಉಸ್ಮಾನೀ ಆಡಳಿತ ಮತ್ತು ಅಳಿದುಳಿದ ಖಿಲಾಫತನ್ನು ಅಳಿಸ ಬಯಸಿದ್ದ. ಅರಬರನ್ನು ರಾಷ್ಟ್ರೀಯತೆಯ ಗುಂಗಿನಲ್ಲಿರಿಸಿ ಅವರನ್ನು ದಂಗೆ ಮತ್ತು ವಿಧ್ವಂಸಕ ಕೃತ್ಯಗಳಿಗೆ ಪ್ರೇರೇಪಿಸುವುದು ಅವನ ಉದ್ದೇಶವಾಗಿತ್ತು. ತುರ್ಕರ ಸಂಪರ್ಕ ವ್ಯವಸ್ಥೆಯನ್ನು ಲಾರೆನ್ಸ್ ಅಸ್ತವ್ಯಸ್ತಗೊಳಿಸಿದ್ದ. ಅರಬರಿಗೆ ಗೊರಿಲ್ಲಾ ಯುದ್ಧದ ನೇತೃತ್ವ ವಹಿಸಿದ್ದ. ಪ್ರಥಮ ಮಹಾ ಯುದ್ಧದ ವೇಳೆ ಗೊರಿಲ್ಲಾ ಯುದ್ಧದ ಮರವು ಚೆನ್ನಾಗಿ ಬೆಳೆದು ಫಲ ನೀಡ ತೊಡಗಿತ್ತು. ಅನಂತರ ಕಮ್ಯೂನಿಸ್ಟ್ ಚಳವಳಿಗಳು ಅದನ್ನು ತಮ್ಮ ನೆಚ್ಚಿನ ಆಯುಧವಾಗಿ ಮಾಡಿ ಕೊಂಡವು. ಲಾರೆನ್ಸ್‌ನ ನಂತರ ಮಾವುತ್ಸೆ ತುಂಗ್ ಜಗತ್ತಿನ ದ್ವಿತೀಯ ಗೊರಿಲ್ಲಾ ನಾಯಕನಾಗಿದ್ದ. ಈ ಯುದ್ಧ ಪದ್ಧತಿಯನ್ನು ಉನ್ನತಿಗೆ ತಲುಪಿಸಿದ ಕಾಲದಲ್ಲೇ ನಾಸೂಷನ್ (Nasution) ಇಂಡೋನೇಶ್ಯಾದಲ್ಲಿ, ಗ್ಯಾಪ್ (Giap) ವಿಯಟ್ನಾಮ್‌ನಲ್ಲಿ, ಚೀ ಗೋಯರ್ (Che Guevara) ಲ್ಯಾಟಿನ್ ಅಮೇರಿಕದಲ್ಲಿ ಗೊರಿಲ್ಲಾ ಯುದ್ಧವನ್ನು ತಂತಮ್ಮ ಉದ್ದೇಶಗಳಿಗಾಗಿ ಬಳಸಿದರು.

20ನೆಯ ಶತಮಾನದ ಮಧ್ಯಭಾಗದಲ್ಲಿ ರಾಜಕೀಯ ಭಯೋತ್ಪಾದನೆಯು ಮಾವೋಯಿಸ್ಟ್ ಮತ್ತು ಆಧುನಿಕ ಅನಾರ್ಕಿಸ್ಟ್(Neo Anarchist)ನಲ್ಲಿ ಕೇಂದ್ರೀಕೃತ ವಾಯಿತು. ಅವರು ಇಡೀ ಜಗತ್ತಿನ ರಾಜಕೀಯ ವ್ಯವಸ್ಥೆಯನ್ನು ತಮ್ಮ ರಾಜಕೀಯ ಸಿದ್ಧಾಂತದ ಪ್ರಕಾರ ಬದಲಿಸಲು ಹೊರಟಿದ್ದರು. ಅವರಿಗೆ ಮಾವೋ, ಲೆನಿನ್ ಮತ್ತು ಚೀಗೋಯರ್‌ನಂತಹವರ ಚಳವಳಿಯಿಂದ ಸ್ಫೂರ್ತಿ ಮತ್ತು ಉತ್ತೇಜನ ದೊರೆಯುತ್ತಿತ್ತು. ಇವರು ಇಡೀ ಜಗತ್ತಿನ ಮೇಲೆ ಕಮ್ಯೂನಿಸ್ಟ್ ಆಧಿಪತ್ಯವನ್ನು ಸ್ಥಾಪಿಸ ಬಯಸಿದ್ದರು. ಇವರು ತಮ್ಮ ಸಿದ್ಧಾಂತದ ಪ್ರಚಾರಕ್ಕಾಗಿ ನಿಸ್ಸಂಕೋಚವಾಗಿ ಭಯೋತ್ಪಾದನೆಯ ದಾರಿಯನ್ನು ಹಿಡಿಯುತ್ತಿದ್ದರು. ಅದು ಅವರ ದೃಷ್ಟಿಯಲ್ಲಿ ಸಮ್ಮತವಾಗಿತ್ತು. ತನ್ಮೂಲಕ ಅಂದಿನ ಸರಕಾರವು ಅವರ ವಿರುದ್ಧ ಕ್ರಮಕೈಗೊಳ್ಳಬೇಕಾಗುತ್ತಿತ್ತು. ಅದರಿಂದ ಅವರು

ಮರ್ದಿತರಾಗಿ ಜನರ ಅನುಕಂಪ ಗಳಿಸಲು ಶಕ್ತರಾಗುತ್ತಿದ್ದರು. ಅವರು ಈ ಭಯೋತ್ಪಾದನೆಯನ್ನು ನಡೆಸುತ್ತಿರುವುದು ತಮಗಾಗಿಯಲ್ಲ. ಬದಲಾಗಿ ಜನರಿಗೆ ಅವರ ಹಕ್ಕುಗಳನ್ನೂ ನ್ಯಾಯವನ್ನೂ ದೊರಕಿಸಿ ಕೊಡಲಿಕ್ಕಾಗಿ ಎಂದು ಅವರು ಜನರಿಗೆ ಈ ಮೂಲಕ ಮನಗಾಣಿಸುತ್ತಿದ್ದರು. "ಕ್ರಾಂತಿಯು ಬಂದೂಕಿನ ಕೊಳವೆಯಿಂದ ಬರುತ್ತದೆ" ಎಂಬುದು ಅಂದು ಜನಪ್ರಿಯವಾಗಿದ್ದ ಮಾವೋರ ಪ್ರಖ್ಯಾತ ನುಡಿಯಾಗಿತ್ತು. ಈ ಹಿನ್ನೆಲೆಯಲ್ಲೇ ಭಾರತದಲ್ಲಿ ಅನೇಕ ಸಂಘಟನೆಗಳು ಅಸ್ತಿತ್ವಕ್ಕೆ ಬಂದುವು. ಅವುಗಳಲ್ಲಿ 'ನಕ್ಸಲೈಟ್ ಚಳವಳಿ' ಮುಂಚೂಣಿಯಲ್ಲಿತ್ತು.

ಜನಾಂಗೀಯವಾದ ಮತ್ತು ರಾಷ್ಟ್ರೀಯವಾದಗಳೂ ಜಗತ್ತಿನಲ್ಲಿ ಅನೇಕ ಭಯೋತ್ಪಾದಕ ಸಂಘಟನೆಗಳನ್ನು ಹುಟ್ಟು ಹಾಕಿವೆ. ಜರ್ಮನಿ ಅದರ ದೊಡ್ಡ ಕೇಂದ್ರವಾಗಿತ್ತು. ಪಶ್ಚಿಮ ಜರ್ಮನಿಯ ಬಾದರ್ ಮೈನ್‌ಹಾಫ್ (Baader Meinhof) ಅತ್ಯಂತ ಅಪಾಯಕಾರಿ ಭಯೋತ್ಪಾದಕ ಸಂಘಟನೆಯಾಗಿತ್ತು. ಅನಂತರ ಜಪಾನ್‌ನ ರೆಡ್ ಆರ್ಮಿಯು ಈ ರಂಗದಲ್ಲಿ ದೊಡ್ಡ ಸಾಧನೆ ಮಾಡಿತು! ಅಂತಾರಾಷ್ಟ್ರೀಯ ಮಟ್ಟದಲ್ಲಿ ಉರುಗ್ವೆ, ಬ್ರೆಝಿಲ್ ಮತ್ತು ಐರ್ಲೆಂಡ್‌ನಲ್ಲಿ ಭಯೋತ್ಪಾದನೆಯ ಅತ್ಯಂತ ಭಯಾನಕ ಘಟನೆಗಳಾದುವು. ಪಾಶ್ಚಾತ್ಯ ರಾಷ್ಟ್ರಗಳು ತಮ್ಮ ಶಕ್ತಿಯ ಆಧಾರದಲ್ಲಿ ಫೆಲೆಸ್ತೀನ್‌ನ ಭೂಮಿಯಲ್ಲಿ ಒಂದು ಇಸ್ರೇಲಿ ರಾಷ್ಟ್ರವನ್ನು ಸ್ಥಾಪಿಸಿದ ಬಳಿಕ ಅದು ಪಶ್ಚಿಮ ಏಶ್ಯಾಕ್ಕೂ ತಲುಪಿತು. 20ನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತವು ಅನೇಕ ಭಯೋತ್ಪಾದಕ ಸಂಘಟನೆಗಳ ಶಕ್ತಿ ಮತ್ತು ತಂತ್ರಗಳಿಗೆ ಗುರಿಯಾಗಿತ್ತು. ಎಡಪಂಥೀಯ ಭಯೋತ್ಪಾದಕ ಸಂಘಟನೆಗಳಲ್ಲದೆ ಇಲ್ಲಿ ಒಂದು ಬಲಪಂಥೀಯ ಜಾಗತಿಕ ಸಂಘಟನೆ 'ಆನಂದ ಮಾರ್ಗ' ಅಸ್ತಿತ್ವಕ್ಕೆ ಬಂತು. ಭಾರತದ ಬಹುಸಂಖ್ಯಾತರು ಮರ್ದಿತರಾಗಿದ್ದಾರೆಂದು ಅದು ನಂಬುತ್ತದೆ. ಆದ್ದರಿಂದ ಅದನ್ನು ಭಯೋತ್ಪಾದಕ ಕೃತ್ಯಗಳ ಮೂಲಕ ಎಚ್ಚರಿಸಬೇಕು ಎಂಬುದು ಅದರ ಉದ್ದೇಶ. ಅನಂತರ ಸಿಖ್ ಉಗ್ರವಾದಿ ಸಂಘಟನೆಗಳು ಪಂಜಾಬ್‌ನಲ್ಲಿ ಭಯಾನಕ ಭಯೋತ್ಪಾದಕ ಕೃತ್ಯಗಳನ್ನೆಸಗಿದವು. ಸಹಸ್ರಾರು ನಾಗರಿಕರು ಅದಕ್ಕೆ ಬಲಿಯಾದರು. ಕೊನೆಗೆ ದೇಶದ ಓರ್ವ ಪ್ರಧಾನಿ ಇಂದಿರಾ ಗಾಂಧಿಯವರು ಕೂಡಾ ಸಿಖ್ ಭಯೋತ್ಪಾದನೆಗೆ ಬಲಿಯಾದರು. ದೇಶದ ಪೂರ್ವ ಗಡಿಯ ಸಮೀಪ ನಾಗಾಲ್ಯಾಂಡ್ ಮತ್ತು ಅಸ್ಸಾಮ್‌ನಲ್ಲಿ ಉಲ್ಫಾ ತನ್ನ ಭಯೋತ್ಪಾದಕ ಚಳವಳಿಯನ್ನು ಆರಂಭಿಸಿತು. ದೇಶದ ಭ್ರಷ್ಟ ಶಿಕ್ಷಣ ಪದ್ಧತಿ, ನಿರುದ್ಯೋಗ, ಭ್ರಷ್ಟಾಚಾರ ಮತ್ತು ನ್ಯಾಯ ಸಿಗುವಲ್ಲಿನ ಕಷ್ಟ ಮತ್ತು ವಿಳಂಬದಿಂದಾಗಿ ಯುವಕರು ಭಯೋತ್ಪಾದನೆಯ ಹಾದಿ ತುಳಿಯುವುದು ಅನಿವಾರ್ಯವಾಯಿತು.

20ನೆಯ ಶತಮಾನದಲ್ಲಿ ಅತ್ಯಂತ ಭೀಕರ, ಬೀಭತ್ಸ ಮತ್ತು ಹೇಯ ಭಯೋತ್ಪಾದನಾ ಕೃತ್ಯಗಳು ನಡೆದುವು. ಅವುಗಳನ್ನು ಕೇಳಿ ಮನುಷ್ಯನ ಆತ್ಮ ಕಂಪಿಸುತ್ತದೆ. ಲಂಡನ್‌ನಲ್ಲಿ 1974-76ರ ಮಧ್ಯೆ ಐ.ಆರ್.ಎ. (ಐರಿಷ್ ರಿಪಬ್ಲಿಕನ್ ಆರ್ಮಿ)ಯು ತನ್ನ ನಿರಂತರ ಬಾಂಬ್ ದಾಳಿಗಳ ಮೂಲಕ ನೂರಾರು ಅಮಾಯಕ ಜೀವಗಳನ್ನು ಬಲಿ ತೆಗೆದುಕೊಂಡಿತು.

## ಭಾರತದಲ್ಲಿ ಭಯೋತ್ಪಾದನೆ

ನಮ್ಮ ದೇಶವು ಸ್ವಾತಂತ್ರ್ಯಾನಂತರ ನಿರಂತರ ಭಯೋತ್ಪಾದಕ ಕೃತ್ಯಗಳಿಗೆ ಗುರಿಯಾಗುತ್ತಾ ಬಂದಿದೆ. ಬ್ರಿಟೀಷ್ ಇಂಡಿಯಾದಲ್ಲಿ ಸಾಮ್ರಾಜ್ಯಶಾಹಿತ್ವದ ವಿರುದ್ಧ ನಡೆಯುತ್ತಿದ್ದ ಭೂಗತ ಸಶಸ್ತ್ರ ಹೋರಾಟದಲ್ಲಿ ಅಮಾಯಕರನ್ನು ಗುರಿಮಾಡುತ್ತಿರಲಿಲ್ಲ. ಆದರೆ ಸ್ವಾತಂತ್ರ್ಯದ ನಂತರ ಅಸ್ತಿತ್ವಕ್ಕೆ ಬಂದ ಸಂಘಟನೆಗಳಲ್ಲಿ ಈ ವಿಷಾದಕರ ಅಂಶವು ಮೇಲುಗೈ ಸಾಧಿಸಿದೆ. ಭಾರತದ ಹೊರಗಿರುವ ಭಯೋತ್ಪಾದಕ ಸಂಘಟನೆಗಳು ಕೂಡಾ ಭಾರತವನ್ನು ತಮ್ಮ ಕೇಂದ್ರವಾಗಿ ಮಾಡಲು ಪ್ರಯತ್ನಿಸಿದುವು. ಈ ದೇಶದಲ್ಲೂ ಅದರ ಸಹವರ್ತಿಗಳು ಮತ್ತು ಬೆಂಬಲಿಗರು ಜನ್ಮ ತಾಳುತ್ತಿದ್ದರು. ಸ್ವಾತಂತ್ರ್ಯಕ್ಕೆ ಮುಂಚೆ ಭಾರತೀಯ ಸಾಮಾಜದಲ್ಲಿ ನೈತಿಕತೆ ಮತ್ತು ಆಧ್ಯಾತ್ಮಿಕತೆಯ ಸ್ಫೂರ್ತಿಯಿತ್ತು. ಅಂದಿನ ಪಠ್ಯ ಪದ್ಧತಿಯೂ ಮಾನವ ಪ್ರೇಮ, ಅನುಕಂಪ, ಸಮಾನತೆ ಮತ್ತು ಭ್ರಾತೃತ್ವದ ಮೌಲ್ಯಗಳನ್ನು ಬೆಳೆಸಲು ಸಹಕಾರಿಯಾಗಿತ್ತು. ಆದ್ದರಿಂದ ದ್ವೇಷ ಮತ್ತು ಹಿಂಸೆಯ ಅಗ್ನಿ ಅಷ್ಟು ಹೆಚ್ಚಾಗಿ ಕೆರಳುತ್ತಿರಲಿಲ್ಲ. ಆದರೆ 20ನೆಯ ಶತಮಾನದ ಆದಿಯಲ್ಲೇ ಕೆಲವು ಶಕ್ತಿಗಳು ವಿಭಿನ್ನ ಧರ್ಮ, ಸಂಸ್ಕೃತಿ ಮತ್ತು ಜನಾಂಗಗಳ ಮಧ್ಯೆ ಹಗೆತನ ಮತ್ತು ದ್ವೇಷದ ಬೀಜ ಬಿತ್ತಲಾರಂಭಿಸಿದವು. ಮುಖ್ಯವಾಗಿ ಆರೆಸ್ಸೆಸ್‌ನ ಸಂಸ್ಥಾಪಕ ಹೆಡ್ಗೆವಾರ್ ಮತ್ತು ಸಾವರ್ಕರ್‌ರ ಚಿಂತನೆಗಳು ಭಯ ಮತ್ತು ಶತ್ರುತ್ವದ ಅಗ್ನಿಗೆ ಗಾಳಿ ಹಾಕುವ ಕೆಲಸ ಆರಂಭಿಸಿತು. ಅದು ಅನಂತರ ದೊಡ್ಡ ಭಯೋತ್ಪಾದನೆಯ ರೂಪ ತಾಳಿತು. ತನ್ಮೂಲಕ ಕೋಮು ಗಲಭೆಗಳ ಒಂದು ಕೊನೆಯಿಲ್ಲದ ಸರಣಿ ಆರಂಭವಾಯಿತು.

ದೇಶದೊಳಗೆ ತಲೆಯೆತ್ತಿದ ಭಯೋತ್ಪಾದಕ ಸಂಘಟನೆಗಳಲ್ಲಿ 'ಆನಂದ ಮಾರ್ಗ' ಎದ್ದು ಕಾಣುವಂತಹದ್ದಾಗಿತ್ತು. ಅದಲ್ಲದೆ ಖಾಲಿಸ್ತಾನ್ ಚಳವಳಿ, ಜಮ್ಮು ಕಾಶ್ಮೀರ್ ಲಿಬರೇಶನ್ ಫ್ರಂಟ್ ಶಕ್ತಿಶಾಲಿ ಗುಂಪುಗಳಾಗಿ ಹೊರಹೊಮ್ಮಿದುವು. ನಾಗಾಲ್ಯಾಂಡ್, ಮಣಿಪುರ, ಮಿಝೋರಮ್, ತ್ರಿಪುರ ಮತ್ತು ಅಸ್ಸಾಮ್‌ನಲ್ಲಿ ಈ ರಾಜ್ಯಗಳ ಕೆಲವು ಜನರು ಹೊರ ರಾಷ್ಟ್ರಗಳ ತಮ್ಮ ಮಿತ್ರರ ಸಹಾಯದಿಂದ ದೇಶದಲ್ಲಿ ಕ್ಷೋಭೆ ಹರಡುತ್ತಲೇ ಇದ್ದರು. ಅವರ ಅನೇಕ ಸಂಘಟನೆಗಳು ಅಸ್ತಿತ್ವಕ್ಕೆ ಬಂದುವು. ಉದಾ: ಫಿಝೋ ಪರವಾದ ನಾಗಾ ಫೆಡರಲ್ ಗವರ್ನ್‌ಮೆಂಟ್ (N.F.G.), ಚೀನಾ ಪರವಾದ ನ್ಯಾಶನಲ್ ಸೋಶಲಿಸ್ಟ್ ಕೌನ್ಸಿಲ್ ಆಫ್ ನಾಗಾಲ್ಯಾಂಡ್ (NSCN), ಯುನೈಟೆಡ್ ಲಿಬರೇಶನ್ ಫ್ರಂಟ್ ಆಫ್ ಅಸ್ಸಾಮ್ (ULFA), ಅಸ್ಸಾಮ್ ಪೀಪಲ್ಸ್ ಲಿಬರೇಶನ್ ಆರ್ಮಿ (APLA), ಬೋಡೋ ವಿದ್ರೋಹಿಗಳು ಇತ್ಯಾದಿ. ದೇಶದ ಗಡಿನಾಡುಗಳಲ್ಲಿ ವಿಶೇಷವಾಗಿ ಅಸ್ಸಾಮ್, ಕಾಶ್ಮೀರ ಮತ್ತು ತಮಿಳ್ನಾಡಿನಲ್ಲಿ ಇಂತಹ ಸಂಘಟನೆಗಳಿಗೆ ಪ್ರೋತ್ಸಾಹ ದೊರೆಯಿತು. ಕಮ್ಯೂನಿಸ್ಟರೂ ಅನೇಕ ಭಯೋತ್ಪಾದಕರನ್ನು ಸೃಷ್ಟಿಸಿದ್ದಾರೆ. ಅವರಲ್ಲಿ ಹೆಚ್ಚಿನವರು ಚೀನಾದಿಂದ ಸ್ಫೂರ್ತಿ ಪಡೆಯುತ್ತಾರೆ.

## ಇಸ್ಲಾಮಿಕ್ ಭಯೋತ್ಪಾದನೆ

ಭಯೋತ್ಪಾದನೆಯ ಕುರಿತು ಕೆಲವು ಮೂಲಭೂತ ಸ್ವರೂಪದ ವಿಷಯಗಳಿವೆ. ಇವುಗಳಲ್ಲಿ ಕೆಲವು ಗತಕಾಲದ ಮಬ್ಬಿನಲ್ಲಿ ಲೀನವಾಗಿವೆ. ಇನ್ನು ಕೆಲವುದರ ಮೇಲೆ ಪ್ರತಿದಿನ ಉದಯಿಸುವ ಸೂರ್ಯನು ಒಂದು ಹೊಸ ಸಾಣೆಯನ್ನು ಹಿಡಿಯುತ್ತಾನೆ. ಅವುಗಳ ಪೈಕಿ ಅತ್ಯಂತ ಮುಖ್ಯವಾದುದು ಧಾರ್ಮಿಕ ಭಯೋತ್ಪಾದನೆಯ ಸಮಸ್ಯೆಯಾಗಿದೆ. ಧಾರ್ಮಿಕ ಭಯೋತ್ಪಾದನೆಯು ವಸ್ತುತಃ ಯುರೋಪಿನ ಸಮಸ್ಯೆಯಾಗಿದೆ. ಅದು ಸಾಮಾನ್ಯವಾಗಿ ಕ್ರೈಸ್ತ ವರ್ಗಗಳ ಮಧ್ಯೆ ನಡೆಯುತ್ತಿರುತ್ತಿತ್ತು. ಆದರೆ ಇಂದು ಧಾರ್ಮಿಕ ಭಯೋತ್ಪಾದನೆಯೆಂದರೆ ಕೇವಲ ಇಸ್ಲಾಮಿಕ್ ಭಯೋತ್ಪಾದನೆಯೆಂದು ಅರ್ಥೈಸಲಾಗುತ್ತದೆ. ಆದರೆ ಇಸ್ಲಾಮ್ ಧರ್ಮದಲ್ಲಿ ಭಯೋತ್ಪಾದನೆಯ ಯಾವ ಕಲ್ಪನೆಯೂ ಇಲ್ಲ. ಅದು ಶಾಂತಿ, ಸಮಾಧಾನದ ಹರಿಕಾರ. ಅದನ್ನೇ ಅದು ತನ್ನ ಧ್ಯೇಯ(ಮಿಷನ್)ವೆಂದು ಸಾರಿದೆ.

ಹಿಂಸೆ ಮತ್ತು ಇಸ್ಲಾಮ್‌ನ ನಡುವೆ ಬೆಂಕಿ ಮತ್ತು ನೀರಿನ ವೈರವಿದೆ. ಎಲ್ಲಿ ಹಿಂಸೆಯಿದೆಯೋ ಅಲ್ಲಿ ಇಸ್ಲಾಮ್‌ನ ಕಲ್ಪನೆ ಕೂಡಾ ಅಸಾಧ್ಯ. ಎಲ್ಲಿ ಇಸ್ಲಾಮ್ ಇದೆಯೋ ಅಲ್ಲಿ ಹಿಂಸೆಯ ಹಗುರವಾದ ಸ್ವರೂಪವೂ ಇರಲಾರದು. ಇಸ್ಲಾಮ್ ಶಾಂತಿ-ಸಮಾಧಾನದ ಚಿಲುಮೆಯಾಗಿದೆ. ಅದು ಮನುಷ್ಯರ ಮಧ್ಯೆ ಪ್ರೀತಿ ಮತ್ತು ಸೌಹಾರ್ದವನ್ನು ಪ್ರೋತ್ಸಾಹಿಸುವ ಧರ್ಮವಾಗಿದೆ. ಹಿಂಸೆಯು ಅನ್ಯಾಯ ಮತ್ತು ಮೃಗೀಯತೆಯಿಂದ ಹುಟ್ಟುತ್ತದೆ. ರಕ್ತಪಾತ ಮತ್ತು ವಿಧ್ವಂಸಕ ಕೃತ್ಯಗಳಿಂದ ಜೀವಂತ ಉಳಿಯುತ್ತದೆ. ಲೋಕದ ಎಲ್ಲ ಧರ್ಮಗಳೂ ಮಾನವ ಪ್ರಾಣಕ್ಕೆ ಗೌರವ ನೀಡುತ್ತವೆ. ಆತನ ಶಾಂತಿ, ಸಮಾಧಾನ ಮತ್ತು ನಿರ್ಭಯವಾಗಿ ಜೀವಿಸುವ ಹಕ್ಕನ್ನು ಅವು ಎತ್ತಿ ಹಿಡಿಯುತ್ತವೆ. ಈ ಬಗ್ಗೆ ಇಸ್ಲಾಮ್ ಎಲ್ಲರಿಗಿಂತಲೂ ಮುಂದಿದೆ. ಮಾನವನ ಗೌರವಾನ್ವಿತ ಜೀವನ ಸಾಗಿಸುವ ಹಕ್ಕನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯಲ್ಲಿ ಸ್ಪಷ್ಟ ಪದಗಳಲ್ಲಿ ಸಾರಲಾಗಿದೆ.

"ಅಲ್ಲಾಹನು ಸನ್ಮಾನಿಸಿದ ಯಾವ ಜೀವವನ್ನೂ ಅನ್ಯಾಯವಾಗಿ ವಧಿಸಬೇಡಿರಿ."

(ಪವಿತ್ರ ಕುರ್‌ಆನ್, 6:151)

ಇನ್ನೊಂದೆಡೆ ಹೀಗೆ ಆದೇಶಿಸಲಾಗಿದೆ-

"ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡಿದ ಕಾರಣಕ್ಕೆ ಹೊರತು ಯಾರಾದರೂ ಒಬ್ಬ ಮನುಷ್ಯನನ್ನು ಕೊಲೆ ಮಾಡಿದರೆ ಅವನು ಸಕಲ ಮಾನವಕೋಟಿಯನ್ನೇ ಕೊಂದಂತೆ ಮತ್ತು ಒಬ್ಬನು ಇನ್ನೊಬ್ಬನ ಪ್ರಾಣ ಉಳಿಸಿದರೆ ಅವನು ಸಕಲ ಮಾನವಕುಲದ ಪ್ರಾಣ ಉಳಿಸಿದಂತೆ." (ಪವಿತ್ರ ಕುರ್‌ಆನ್, 5:32)

ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು:

ಮಹಾಪಾಪಗಳಲ್ಲಿ ಅತಿದೊಡ್ಡದು ಅಲ್ಲಾಹನ ಜತೆ ಇತರರನ್ನು ಭಾಗೀದಾರರಾಗಿ ಮಾಡುವುದು, ಕೊಲೆ ಮಾಡುವುದು, ತಂದೆ ತಾಯಿಗಳಿಗೆ ಅವಿಧೇಯತೆ ತೋರುವುದು ಮತ್ತು ಸುಳ್ಳು ಹೇಳುವುದಾಗಿದೆ. [ವರದಿ: ಹ. ಅನಸ್ ಬಿನ್ ಮಾಲಿಕ್(ರ)]

ಇನ್ನೊಂದು ಪ್ರವಾದಿ ವಚನ ಈ ರೀತಿಯಿದೆ:

"ಸತ್ಯವಿಶ್ವಾಸಿಯು ತನ್ನ ಧರ್ಮದ ವಿಶಾಲತೆಯಲ್ಲಿರುತ್ತಾನೆ- ಅವನು ಅನ್ಯಾಯವಾಗಿ ಯಾರನ್ನಾದರೂ ವಧಿಸುವ ತನಕ." [ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ)]

ಅಲ್ಲಾಹ್ ಮತ್ತು ಪ್ರವಾದಿಯ(ಸ) ಸ್ಪಷ್ಟ ಆದೇಶಗಳ ಪರಿಣಾಮವಾಗಿ ಕಾಲು ಶತಮಾನದ ಅಲ್ಪಾವಧಿಯಲ್ಲಿ ಅರೇಬಿಯಾದಂತಹ ರಕ್ತದಾಹಿ ಜನಾಂಗದೊಳಗೆ ಆತ್ಮಗೌರವ ಮತ್ತು ಶಾಂತಿಪ್ರಿಯತೆ ಉಂಟಾಯಿತು. ಅದರಿಂದಾಗಿ ಪ್ರವಾದಿವರ್ಯರ(ಸ) ಭವಿಷ್ಯ ನುಡಿಯಂತೆ ಸನ್‌ಅ(ಯಮನ್)ದಿಂದ ಹದರ್ ಮೌತ್ (ಸೌದಿ ಅರೇಬಿಯಾ) ತನಕ ಓರ್ವ ಮಹಿಳೆ ಒಂಟಿಯಾಗಿ ಪ್ರಯಾಣ ಮಾಡಬಹುದಾಗಿತ್ತು. ಆಕೆಯ ಪ್ರಾಣಕ್ಕಾಗಲಿ, ಮಾನಕ್ಕಾಗಲಿ, ಸೊತ್ತಿಗಾಗಲಿ ಯಾವ ಅಪಾಯವೂ ಇರುತ್ತಿರಲಿಲ್ಲ. ವಸ್ತುತಃ ಆ ದೇಶದಲ್ಲಿ 25 ವರ್ಷಗಳ ಹಿಂದೆ ದೊಡ್ಡದೊಡ್ಡ ವ್ಯಾಪಾರಿ ತಂಡಗಳು ಕೂಡಾ ಸುರಕ್ಷಿತವಾಗಿ ಸಾಗುವಂತಿರಲಿಲ್ಲ.

ಇಸ್ಲಾಮಿನ ಶಿಕ್ಷಣದ ಪರಿಣಾಮವಾಗಿ ಲೋಕದಲ್ಲಿ ಮಾನವ ಪ್ರಾಣಕ್ಕೆ ಗೌರವ ನೀಡಲಾದ ಅದ್ಭುತ ದೃಶ್ಯಗಳು ಕಂಡು ಬಂದುವು. ಲೋಕದ ದೊಡ್ಡದೊಡ್ಡ ಸಾಮ್ರಾಜ್ಯಗಳಲ್ಲಿ ಮಾನವ ಪ್ರಾಣದ ಅಗೌರವದ ಭಯಾನಕ ಘಟನೆಗಳು ನಡೆಯುತ್ತಿದ್ದುವು. ಈ ಪರಂಪರೆಯು ಇಸ್ಲಾಮಿನ ಆಗಮನದೊಂದಿಗೆ ಕೊನೆಗೊಂಡಿತು. ಭಯೋತ್ಪಾದನೆ ಮತ್ತು ರಕ್ತಪಾತದಿಂದ ಮಾನವಲೋಕಕ್ಕೆ ಮುಕ್ತಿ ದೊರೆಯಿತು. ತಮ್ಮ ಅತಿಥಿ ಅಥವಾ ಪ್ರೇಯಸಿಯ ಮನೋರಂಜನೆಗಾಗಿ ರಾಜ ಮಹಾರಾಜರು ತಮ್ಮ ಗುಲಾಮರನ್ನು ಕ್ರೂರ ಮೃಗಗಳಿಂದ ಹರಿದು ತಿನ್ನಿಸುತ್ತಿದ್ದರು. ಅವರನ್ನು ಪ್ರಾಣಿಗಳಂತೆ ಕೊಯ್ಯಿಸುತ್ತಿದ್ದರು. ಅವರನ್ನು ಬೆಂಕಿಗೆ ಹಾಕಿ ಉರಿಯುವ ತಮಾಷೆ ನೋಡುತ್ತಿದ್ದರು. ಕೈದಿಗಳು ಮತ್ತು ಗುಲಾಮರನ್ನು ಚಿತ್ರಹಿಂಸೆಗೆ ಗುರಿ ಮಾಡಿ ಸಾಯಿಸುವುದು ಒಂದು ಸಾಮಾನ್ಯ ದೃಶ್ಯವಾಗಿತ್ತು. ಇದನ್ನು ಇಸ್ಲಾಮ್ ಕಠಿಣವಾಗಿ ನಿಷೇಧಿಸಿತು. ಗ್ರೀಕ್ ಮತ್ತು ರೋಮ್‌ನ ದೊಡ್ಡದೊಡ್ಡ ತತ್ವಜ್ಞಾನಿಗಳು ಮಾನವ ಪ್ರಾಣವನ್ನು ಈ ರೀತಿ ಕ್ರೂರವಾಗಿ ವಧಿಸುವುದನ್ನು ಧರ್ಮಸಮ್ಮತವೆಂದು ಸಾರಿದ್ದರು. ಗ್ರೀಸ್‌ನಲ್ಲಿ ತಂದೆಗೆ ಮಕ್ಕಳ ಕೊಲೆಯ ಪೂರ್ಣ ಅಧಿಕಾರವಿತ್ತು. ಕೆಲವು ತತ್ವಜ್ಞಾನಿಗಳ ಪ್ರಕಾರ ಆತ್ಮಹತ್ಯೆಯೂ ಕೆಟ್ಟ ಕೃತ್ಯವಾಗಿರಲಿಲ್ಲ. ಪತಿಯು ಪತ್ನಿಯನ್ನು ಕೊಲೆ ಮಾಡುವುದೆಂದರೆ ಯಾವುದಾದರೂ ಸಾಕು ಪ್ರಾಣಿಯನ್ನು ಕೊಂದಂತೆಯೇ ಆಗಿತ್ತು. ಅದಕ್ಕೆ ಗ್ರೀಕ್ ಕಾನೂನಿನಲ್ಲಿ ಯಾವ ಶಿಕ್ಷೆಯೂ ಇರಲಿಲ್ಲ. ಭಾರತದಲ್ಲಿ ಪತಿಯ ಚಿತೆಗೆ ಹಾರಿ ಭಸ್ಮವಾಗುವುದು ವಿಧವೆಯ ಧಾರ್ಮಿಕ ಕರ್ತವ್ಯವಾಗಿತ್ತು. ಶೂದ್ರರು ಕ್ರಿಮಿಕೀಟಗಳಿಗಿಂತಲೂ ಕೀಳಾಗಿದ್ದರು. ಇಸ್ಲಾಮ್ ಭೀಕರತೆ ಮತ್ತು ಬರ್ಬರತೆಯ ಈ ಅಂಧಕಾರಗಳನ್ನು ಅಳಿಸಿ ಯಾವ ಜೀವವನ್ನೂ ಅನ್ಯಾಯವಾಗಿ ವಧಿಸಬಾರದೆಂದು ತಾಕೀತು ಮಾಡಿತು.

ಇಸ್ಲಾಮ್ ಧಾರ್ಮಿಕ ನಂಬಿಕೆ ಮತ್ತು ಧರ್ಮ ಪ್ರಚಾರದಲ್ಲಿ ಮಾನವ ಪ್ರೇಮಿ ಮತ್ತು ಅತ್ಯಂತ ಸಹಿಷ್ಣುವಾಗಿದೆ. ಅದು ಯಾವುದೇ ಧರ್ಮ, ನಂಬಿಕೆ ಮತ್ತು

ಸಂಸ್ಕೃತಿಯನ್ನು ಅನುಸರಿಸುವ ಮಾನವನ ಜನ್ಮಸಿದ್ಧ ಹಕ್ಕನ್ನು ಗೌರವಿಸುತ್ತದೆ. ಅದು ಸತ್ಯವನ್ನು ಸಾರುವ ಮತ್ತು ಮಾತು-ಕೃತಿಗಳ ಮೂಲಕ ಅದಕ್ಕೆ ಸಾಕ್ಷ್ಯ ವಹಿಸುವ ಕರ್ತವ್ಯವನ್ನು ಮಾತ್ರ ಅದರ ಅನುಯಾಯಿಗಳ ಮೇಲೆ ಹೊರಿಸಿದೆಯೇ ವಿನಾ ಅದನ್ನು ಬಲವಂತವಾಗಿ ಯಾರ ಮೇಲೆಯೂ ಹೇರುವ ಅನುಮತಿ ಅವರಿಗೆ ನೀಡಿಲ್ಲ. ಪವಿತ್ರ ಕುರ್‌ಆನ್ ಇದನ್ನು ಹೀಗೆ ಸ್ಪಷ್ಟಪಡಿಸುತ್ತದೆ-

**"ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರಗಳಿಲ್ಲ. ಸನ್ಮಾರ್ಗವು ದುರ್ಮಾರ್ಗದಿಂದ ಪ್ರತ್ಯೇಕಿಸಲ್ಪಟ್ಟಿದೆ. ಆದ್ದರಿಂದ ಯಾರು ಅತಿಕ್ರಮವನ್ನು ನಿರಾಕರಿಸಿ ಅಲ್ಲಾಹನ ಮೇಲೆ ವಿಶ್ವಾಸವಿಡುತ್ತಾನೋ ಅವನು ಎಂದೆಂದಿಗೂ ಮುರಿಯದಂತಹ ಬಲವಾದ ಆಧಾರವನ್ನು ನೆಚ್ಚಿಕೊಂಡನು." (2:256)**

**"ಪ್ರವಾದಿವರ್ಯರೇ(ಸ) ಹೀಗೆ ಸ್ಪಷ್ಟವಾಗಿ ಹೇಳಿ ಬಿಡಿರಿ!: ಇದು ನಿಮ್ಮ ಪ್ರಭುವಿನಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿ ಕೊಳ್ಳಲಿ. ಇಷ್ಟವಿದ್ದವರು ನಿರಾಕರಿಸಲಿ." (18:29)**

**"ನಿಮ್ಮ ಧರ್ಮ ನಿಮಗೆ ಮತ್ತು ನನ್ನ ಧರ್ಮ ನನಗೆ." (109:6)**

ಅಲ್ಲಾಹನ ಈ ಆದೇಶಗಳ ಪರಿಣಾಮವಾಗಿ ಇಸ್ಲಾಮೀ ಇತಿಹಾಸದಲ್ಲಿ ಮುಸ್ಲಿಮರು ಯಾರನ್ನೂ ಇಸ್ಲಾಮ್ ಧರ್ಮ ಸ್ವೀಕರಿಸುವಂತೆ ಬಲವಂತ ಪಡಿಸಲಿಲ್ಲ. ಅವರು ಪ್ರವಾದಿ ಚರ್ಯೆಯನ್ನು ಅನುಸರಿಸಿದರು. ಪ್ರವಾದಿ(ಸ) ಎಂದೂ ಯಾರನ್ನೂ ಇಸ್ಲಾಮ್ ಸ್ವೀಕರಿಸಲು ಒತ್ತಾಯ ಪಡಿಸಿರಲಿಲ್ಲ. ದ್ವಿತೀಯ ಖಲೀಫಾ ಉಮರ್ ಫಾರೂಕ್‌ರವರು(ರ) ತಮ್ಮ ಗುಲಾಮ ಅಸ್ಬಕ್ ಎಂಬವರಿಗೆ ಇಸ್ಲಾಮಿನ ಸಂದೇಶ ನೀಡುತ್ತಿದ್ದರು. ಆತ ಅದನ್ನು ನಿರಾಕರಿಸಿದಾಗ, ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರಗಳಿಲ್ಲ ಎಂದು ಹೇಳಿಬಿಡುತ್ತಿದ್ದರು.

ಮುಸ್ಲಿಮ್ ಸಮಾಜದಲ್ಲಿರುವ ಯಾವುದಾದರೂ ಭಿನ್ನಾಭಿಪ್ರಾಯದ ಬಗ್ಗೆ ಹಿಂಸೆಯನ್ನು ಬಳಸಬಾರದು ಎಂದು ಆದೇಶಿಸಿದಂತೆಯೇ ಅಂತರ್-ಜನಾಂಗ, ಅಂತರ್ ಧರ್ಮ ಮತ್ತು ಅಂತರ್ ರಾಷ್ಟ್ರೀಯ ಸಂಬಂಧಗಳಲ್ಲೂ ಅದು ಅತ್ಯುನ್ನತ ಮಟ್ಟದ ಸಚ್ಚಾರಿತ್ರ್ಯವನ್ನು ಆದೇಶಿಸುತ್ತದೆ.

**"ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯ ಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ. ನೀವು ಧರ್ಮದ ವಿಷಯದಲ್ಲಿ ನಿಮ್ಮ ವಿರುದ್ಧ ಯುದ್ಧ ಮಾಡಿರುವ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರುವ ಮತ್ತು ನಿಮ್ಮನ್ನು ಹೊರ ಹಾಕುವ ವಿಷಯದಲ್ಲಿ ಪರಸ್ಪರ ಸಹಕರಿಸಿರುವ ಜನರೊಂದಿಗೆ ಸ್ನೇಹ ಬೆಳೆಸುವುದರಿಂದ ಮಾತ್ರ ಅಲ್ಲಾಹನು ನಿಮ್ಮನ್ನು ತಡೆಯುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುವವರೇ ಅಕ್ರಮಿಗಳು." (ಪವಿತ್ರ ಕುರ್‌ಆನ್, 60:8-9)**

ಧರ್ಮದ ವಿಷಯದಲ್ಲಿ ಯುದ್ಧವು ನೇರವಾಗಿಯೂ ಆಗುತ್ತದೆ ಮತ್ತು ಪರೋಕ್ಷವಾಗಿಯೂ ಆಗುತ್ತದೆ. ಈ ವಿಷಯದಲ್ಲಿ ಶಾಂತಿ-ಸಂಧಾನ ಯಾಕೆ ಸಾಧ್ಯವಿಲ್ಲವೆಂದರೆ ಇದು ಇಸ್ಲಾಮ್ ತೊರೆಯುವ ಅಥವಾ ಅದರಲ್ಲಿ ಹೆಚ್ಚು ಕಡಿಮೆ ಮಾಡುವ ಹಂತಕ್ಕೂ ತಲುಪಬಹುದು. ಇದರಿಂದ ಅನೇಕ ಕೆಡುಕು ಮತ್ತು ಅನ್ಯಾಯಗಳ ಜತೆ ಸಹಕರಿಸುವುದು ಅನಿವಾರ್ಯವಾಗುತ್ತದೆ. ವಸ್ತುತಃ ಅಲ್ಲಾಹನು ಈ ರೀತಿ ಆದೇಶಿಸಿರುವನು-

**"ಪುಣ್ಯ ಹಾಗೂ ದೇವಭಯದ ಕಾರ್ಯ ಗಳಲ್ಲಿ ಎಲ್ಲರ ಜೊತೆ ಸಹಕರಿಸಿರಿ ಮತ್ತು ಪಾಪ ಹಾಗೂ ಅತಿರೇಕ ಕಾರ್ಯಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ."**

**(ಪವಿತ್ರ ಕುರ್‌ಆನ್, 5:2)**

ಧರ್ಮದ ವಿಷಯದಲ್ಲಿ ಯಾವುದೇ ಜನಾಂಗದೊಂದಿಗೆ ಸಂಧಾನ ಮಾಡುವುದೆಂದರೆ ಅದು ಕೆಲವೊಮ್ಮೆ ಅಶ್ಲೀಲತೆ, ಕೆಡುಕು ಮತ್ತು ಅನ್ಯಾಯದ ಅನೇಕ ರೂಪಗಳ ಬಗ್ಗೆಯೂ ಒಪ್ಪಂದ ಮಾಡಿಕೊಳ್ಳುವುದನ್ನು ಅನಿವಾರ್ಯಗೊಳಿಸುತ್ತದೆ. ಪವಿತ್ರ ಕುರ್‌ಆನ್‌ನಲ್ಲಿ ಅಲ್ಲಾಹನು ಸ್ಪಷ್ಟವಾಗಿ ಆದೇಶಿಸಿದ್ದಾನೆ-

**"ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆಜ್ಞೆ ನೀಡುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅಕ್ರಮ, ಅತ್ಯಾಚಾರಗಳನ್ನು ನಿಷೇಧಿಸುತ್ತಾನೆ." (16:90)**

ಜಗತ್ತಿನ ಅನೇಕ ಬಡ, ಹಿಂದುಳಿದ ಮತ್ತು ಕೀಳರಿಮೆಗೆ ಸಿಲುಕಿದ ಜನರು ಆಧುನಿಕ ಪಾಶ್ಚಾತ್ಯ ಸಂಸ್ಕೃತಿಯ ವಾಹಕರ ದನಿಗೆ ದನಿಗೂಡಿಸುತ್ತಾರೆ. ಮನುಷ್ಯನ ಧರ್ಮ, ನಂಬಿಕೆ, ಶ್ರದ್ಧೆ ಮತ್ತು ಮೌಲ್ಯಗಳ ವಿಷಯವನ್ನು ಆ ಸಂಸ್ಕೃತಿಯು ಅವನ ಮುಖ್ಯ ಮೂಲಭೂತ ಹಕ್ಕುಗಳಲ್ಲಿ ಸೇರಿದೆ ಎಂದು ಒಪ್ಪಿಕೊಳ್ಳುವುದಿಲ್ಲ. ಲೋಕದಲ್ಲಿ ಯಾವ ದೇಶದಲ್ಲಾದರೂ ಯಾವುದೇ ಧರ್ಮ ಮತ್ತು ವಿಶ್ವಾಸದ ಜನರ ವಿರುದ್ಧ ಮನುಷ್ಯನು ಸರ್ವತಂತ್ರ ಸ್ವತಂತ್ರನಾಗಿದ್ದಾನೆಂಬ ತತ್ವದಂತೆ ಕಾನೂನು ರಚಿಸಲಾಗುತ್ತದೆ. ಯಾವುದಾದರೂ ವರ್ಗ ಅದನ್ನು ವಿರೋಧಿಸಿದರೆ ಅದನ್ನು ಧರ್ಮಾಂಧತೆ ಮತ್ತು ಮೂಲಭೂತವಾದವೆಂದು ಹೀಯಾಳಿಸಲಾಗುತ್ತದೆ. ಧಾರ್ಮಿಕ ತತ್ವಗಳು ಮತ್ತು ನಂಬಿಕೆಗಳ ಬಗ್ಗೆ ನಿಷ್ಠೆ ಮತ್ತು ನಿಷ್ಕಳಂಕ ಧಾರ್ಮಿಕ ಮೌಲ್ಯಗಳ ಪಾಲನೆಯು ಪಾಶ್ಚಾತ್ಯ ನಾಗರಿಕತೆಯ ದೃಷ್ಟಿಯಲ್ಲಿ ಮತ್ತು ಅವರ ನಿಘಂಟಿನಲ್ಲಿ ಫ್ಯಾಸಿಸಮ್ ಮತ್ತು ಭಯೋತ್ಪಾದನೆಯಾಗಿದೆ.

ಸಲ್ಮಾನ್ ರುಶ್ದಿ ಇಸ್ಲಾಮಿನ ಪ್ರವಾದಿಯ(ಸ) ಬಗ್ಗೆ ಅತ್ಯಂತ- ಕೀಳ್ಮಟ್ಟದ, ಕಿಡಿಗೇಡಿತನ ಮತ್ತು ಕುತಂತ್ರದ ಶೈಲಿಯಲ್ಲಿ ಕೆಸರೆರಚಿದಾಗ ಅದು ಯಾವುದೇ ಸುಸಂಸ್ಕೃತ ಸಮಾಜಕ್ಕೆ ಸಹ್ಯವಾಗಿರಲಿಲ್ಲ. ಆದರೆ ಪಶ್ಚಿಮವು ಅದನ್ನು ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಲ್ಲಿ ಆಕ್ಷೇಪಾರ್ಹವಲ್ಲವೆಂದು ಸಾರಿತು. ಮಾತ್ರವಲ್ಲ ಆತನ ಉದ್ಧಟತನವನ್ನು ಅವರು ಕೊಂಡಾಡಿದರು. ತದ್ವಿರುದ್ಧವಾಗಿ ಯಾರ ಭಾವನೆಗಳು ಅದರಿಂದಾಗಿ ಘಾಸಿಗೊಂಡಿದ್ದವೋ ಅವರು ಪಶ್ಚಿಮದ ಈ ಇಸ್ಲಾಮ್ ವಿರೋಧಿ ಜೀತದಾಳನ್ನು ಖಂಡಿಸಿದರು. ಆಗ ಮಾನವ ಸ್ವಾತಂತ್ರ್ಯದ ವಕ್ತಾರರಂತೆ ವರ್ತಿಸುವ ಯಹೂದಿ ಮತ್ತು ಕ್ರೈಸ್ತ

ಮಾಧ್ಯಮಗಳು ಮತ್ತು ಬುದ್ಧಿಜೀವಿಗಳು ಕೆರಳಿ ಕೆಂಡವಾದರು.

ಇಸ್ಲಾಮ್ ಹಿಂಸೆ ಮತ್ತು ಭಯೋತ್ಪಾದನೆಗೆದುರಾಗಿ ಶಾಂತಿ- ಸಮಾಧಾನ, ಭ್ರಾತೃತ್ವ ಮತ್ತು ಗೆಳೆತನಗಳಿಗೆ ಎಷ್ಟು ಮಹತ್ವ ನೀಡುತ್ತದೆಂಬುದನ್ನು ಪ್ರವಾದಿ ಮುಹಮ್ಮದ್(ಸ) ಅವರು ಅರೇಬಿಯಾದ ನೆರೆಯಲ್ಲಿದ್ದ ದೇಶಗಳ ಅಧಿಪತಿಗಳಿಗೆ ರವಾನಿಸಿದ ಪತ್ರಗಳಿಂದ ಸ್ಪಷ್ಟವಾಗುತ್ತದೆ. ಆ ಅಧಿಪತಿಗಳು ತಮ್ಮ ಪ್ರಜೆಗಳನ್ನು ಆಯ್ಕೆಯ ಸ್ವಾತಂತ್ರ್ಯದಿಂದ ವಂಚಿಸಿದ್ದರು. ಜನರ ಕಾಲುಗಳಿಗೆ ಗುಲಾಮಗಿರಿ ಮತ್ತು ದಬ್ಬಾಳಿಕೆಯ ಬೇಡಿಗಳನ್ನು ತೊಡಿಸಿದ್ದರು. ರೋಮ್‌ನ ಹರ್ಕುಲಿಸ್‌ನನ್ನು ರೋಮ್‌ನ ಗೌರವಾನ್ವಿತ ಹರ್ಕುಲಿಸ್ ಎಂದೂ ಇರಾನ್‌ನ ಕಿಸ್ರಾನನ್ನು ಇರಾನ್‌ನ ಗೌರವಾನ್ವಿತ ಕಿಸ್ರಾ ಎಂದೂ ಅಭಿಸಂಬೋಧಿಸಿ ಪ್ರವಾದಿಯವರು(ಸ) ಅವರಿಗೆ ಮುಂದೆ ಬರಲಿರುವ ಕ್ರಾಂತಿಯ ಬಗ್ಗೆ ಸಕಾರಾತ್ಮಕ ನಿಲುವು ತಳೆದರೆ ಪೂರ್ಣ ಶಾಂತಿ-ಸಮಾಧಾನದಿಂದಿರುವಿರಿ ಎಂದು ಭರವಸೆ ನೀಡಿದರು.

ಪ್ರವಾದಿಯವರು(ಸ) ಮದೀನಾಕ್ಕೆ ಹೋದ ಬಳಿಕ ಅಲ್ಲಿನ ಜನರೊಂದಿಗೆ ಮಾಡಿಕೊಂಡ ಒಪ್ಪಂದ, ನಜ್ರಾನ್‌ನ ಕ್ರೈಸ್ತರ ಜತೆ ಮಾಡಿಕೊಂಡ ಒಡಂಬಡಿಕೆ, ಅನಂತರ ಕ್ರೈಸ್ತ ಮತ್ತು ಯಹೂದಿಗಳಲ್ಲದ ಇತರ ವಿಗ್ರಹಾರಾಧಕ ಜನಾಂಗಗಳೊಂದಿಗೆ ಪ್ರವಾದಿ ಯವರು(ಸ) ಕೈಗೊಂಡ ಗೌರವಾದರದ ವರ್ತನೆಯು ಮಾನವ ಇತಿಹಾಸದ ಅತ್ಯಂತ ಉಜ್ವಲ ಅಧ್ಯಾಯಗಳಾಗಿವೆ. ಮುಸ್ಲಿಮರೊಂದಿಗೆ ಸಂಧಾನ ಮಾಡುವವರಿಗೆ ಸಂಧಾನದ ಉದ್ದೇಶ ಮತ್ತು ಸಂಧಾನದ ಹೊಣೆಯ ಒಂದು ಸ್ಪಷ್ಟ ಕಲ್ಪನೆಯಿದೆ. ಇಸ್ಲಾಮ್ ಮತ್ತು ಖಡ್ಗವನ್ನು ಅವಿಭಾಜ್ಯ ಅಂಗಗಳಾಗಿ ಪರಿಗಣಿಸುವವರು ಅದರ ರೂಪ ಕೆಡಿಸುವುದಕ್ಕೆ ಪ್ರಯತ್ನಿಸಿದ್ದರು. ವಸ್ತುತಃ ಈ ಸಂಧಾನದ ಪರಿಣಾಮವಾಗಿ ಯಾವ ವ್ಯಕ್ತಿಯ ಮೇಲೂ, ಅವನು ಮುಸ್ಲಿಮನಾಗಿರಲಿ, ಮುಸ್ಲಿಮೇತರನಾಗಿರಲಿ ವಿಶ್ವಾಸವನ್ನು ಸ್ವೀಕರಿಸುವ ವಿಷಯದಲ್ಲಿ ಯಾವುದೇ ಒತ್ತಾಯ- ಬಲಾತ್ಕಾರಗಳಿಲ್ಲವೆಂಬ ಧೋರಣೆಯನ್ನು ಅನುಸರಿಸಲಾಗುತ್ತಿತ್ತು. ಇಸ್ಲಾಮಿನ ಆರಂಭ ಕಾಲದಲ್ಲಿ ನಾಲ್ವರು ಖಲೀಫಾಗಳು ಜಿಹಾದ್‌ಗಾಗಿ ಸೇನೆಯನ್ನು ಕಳಿಸುವಾಗ ಅದಕ್ಕೆ ಯುದ್ಧ ಮಾಡದವನ ಜೀವದ ಸುರಕ್ಷಿತತೆ ಮತ್ತು ಅವನ ಶಾಂತಿಯನ್ನು ಕಾಪಾಡುವ ಆದೇಶ ನೀಡಿ ಕಳುಹಿಸಲಾಗುತ್ತಿತ್ತು. ಇದರಿಂದ ಇಸ್ಲಾಮಿನ ಸಾಂಸ್ಕೃತಿಕ ಕಲ್ಪನೆಯಲ್ಲಿ ಹಿಂಸೆ ಮತ್ತು ಬರ್ಬರತೆಗೆ ಆಸ್ಪದವೇ ಇಲ್ಲವೆಂದು ವ್ಯಕ್ತವಾಗುತ್ತದೆ.

ಇಸ್ಲಾಮ್ ಅನ್ಯಾಯದ ವಿರುದ್ಧ ಸ್ವರವೆತ್ತುವುದಕ್ಕೆ ಮತ್ತು ಅನ್ಯಾಯವೆಸಗುವವನ ಮುಂದೆ ಸತ್ಯದ ವಚನ ಹೇಳುವುದಕ್ಕೆ ಒತ್ತು ನೀಡಿದೆ. ಅದನ್ನು ಓರ್ವ ನೈಜ ಸತ್ಯವಿಶ್ವಾಸಿಯ ಅನಿವಾರ್ಯ ಗುಣವೆಂದು ಇಸ್ಲಾಮ್ ಸಾರಿದೆ. ಜಿಹಾದ್ ಮತ್ತು ಬಲ ಪ್ರಯೋಗದಿಂದ ಅನ್ಯಾಯವನ್ನು ಅಳಿಸುವುದರ ವಾಸ್ತವಿಕತೆ ಇದುವೇ ಆಗಿದೆ. ಅದನ್ನು ಪಾಶ್ಚಾತ್ಯ ಲೇಖಕರು ಅತ್ಯಂತ ವಿರೂಪಗೊಳಿಸಿದ್ದಾರೆ. ಅದನ್ನು ಇಸ್ಲಾಮ್ ಶಾಂತಿಗೆ ಎದುರಾಗಿದೆ ಎಂಬುದರ ಪುರಾವೆಯ ರೂಪದಲ್ಲಿ ತೋರಿಸಿದ್ದಾರೆ. ಜಿಹಾದನ್ನು ಹಿಂಸೆ, ಕೊಲೆ ಮತ್ತು ವಿಧ್ವಂಸಕತೆಯೊಂದಿಗೆ ಜೋಡಿಸಲು ಅವರು ಪ್ರಯತ್ನಿಸಿದ್ದಾರೆ. ಇಸ್ಲಾಮ್

ಒಂದೆಡೆ ಮಾನವ ಪ್ರಾಣದ ಘನತೆ-ಗೌರವವನ್ನು ಸಾರಿರುವಾಗ ಇನ್ನೊಂದೆಡೆ ಗಲಭೆ-ಗೊಂದಲಗಳನ್ನು ಹರಡುವ ಅವಕಾಶ ಅದು ಯಾರಿಗೂ ನೀಡುವುದಿಲ್ಲ. ಮಾನವ ರಕ್ತ ಹರಿಸುವವರನ್ನು ಅದು ಕ್ಷಮಿಸುವುದಿಲ್ಲ.

ಗಲಭೆ-ಗೊಂದಲ, ಅನ್ಯಾಯ-ಅತ್ಯಾಚಾರಗಳನ್ನು ಸಾಮೂಹಿಕವಾಗಿ ತಡೆಯಲು ಅದು ಜಿಹಾದ್‌ನ ಆದೇಶ ನೀಡಿದೆ. ಅದರ ಉದ್ದೇಶ ಕೇವಲ ಎದುರಾಳಿಯನ್ನು ಮುಗಿಸುವುದು ಅಥವಾ ಅವನಿಗೆ ನಷ್ಟ ಉಂಟು ಮಾಡುವುದಲ್ಲ. ಬದಲಾಗಿ ಅವನಿಂದಾಗುವ ಕೇಡನ್ನು ನಿವಾರಿಸುವುದಾಗಿದೆ. ಅವನ ಕೇಡನ್ನು ನಿವಾರಿಸಲು ಎಷ್ಟು ಬೇಕೋ ಅಷ್ಟೇ ಶಕ್ತಿಯನ್ನು ಉಪಯೋಗಿಸಬೇಕೆಂಬುದು ಇಸ್ಲಾಮಿನ ನಿಯಮವಾಗಿದೆ. ಯಾರು ಯುದ್ಧಕ್ಕೆ ಮುಂದಾಗುವರೋ ಮತ್ತು ಯಾರಿಂದ ಕೇಡಿನ ಭಯವಿದೆಯೋ ಅವರ ವಿರುದ್ಧ ಮಾತ್ರ ಆ ಶಕ್ತಿಯನ್ನು ಉಪಯೋಗಿಸಬೇಕು. ಇತರ ಯಾರಿಗೂ ಯಾವುದೇ ರೀತಿಯ ಕಿರುಕುಳ ಕೊಡಬಾರದು.

ಪ್ರವಾದಿಯವರ(ಸ) ಜೀವನವನ್ನು ಮುಂದಿಟ್ಟುಕೊಂಡು ನೋಡಿದರೆ ಇಸ್ಲಾಮಿನ ಒಂದು ನಿಲುವು ನಮಗೆ ಸ್ಪಷ್ಟವಾಗುತ್ತದೆ. ನಾವು ಯಾವ ಸಮಾಜದಲ್ಲಿ ಬದುಕುತ್ತಿದ್ದೇವೋ, ನಾವು ಯಾವ ಸಮಾಜದ ಒಂದು ಭಾಗವಾಗಿದ್ದೇವೋ ಅದರಲ್ಲಿ ಹಿಂಸೆ ಎಬ್ಬಿಸುವ, ವಿಧ್ವಂಸಕ ಕೃತ್ಯಗಳನ್ನೆಸಗುವ ಮತ್ತು ಅದರ ವಿರುದ್ಧ ಯುದ್ಧ ಹೂಡುವ ಅನುಮತಿ ನಮಗಿಲ್ಲ. ಇತರರು ಅನ್ಯಾಯ-ಅಕ್ರಮಗಳಲ್ಲಿ ತೊಡಗಿದ್ದರೆ ಅದನ್ನು ತಾಳ್ಮೆಯಿಂದ ಸಹಿಸಿಕೊಳ್ಳಬೇಕು. ತಮ್ಮ ಧ್ಯೇಯ ಸಾಧನೆಗಾಗಿ ಶಾಂತಿಯುತ ಹೋರಾಟವನ್ನು ಮುಂದುವರಿಸಬೇಕು. ಯಾವುದೇ ಸಮಾಜದಲ್ಲಿರುತ್ತಾ ಅದರ ಅಕ್ರಮಿಗಳ ವಿರುದ್ಧ ಗೊರಿಲ್ಲಾ ಯುದ್ಧ ಮಾಡುವುದರ ಔಚಿತ್ಯದ ಬಗ್ಗೆ ವಿದ್ವಾಂಸರು ಚಿಂತನೆ ನಡೆಸಿದ ಬಳಿಕ ಯಾವ ನಿಷ್ಕರ್ಷೆಗೆ ತಲುಪಿದರೆಂದರೆ ಇಂತಹ ಪರಿಸ್ಥಿತಿಯಲ್ಲಿ ಪ್ರವಾದಿ(ಸ) ಮತ್ತು ಅವರ ಸಂಗಾತಿಗಳ ಮಕ್ಕಾ ಜೀವನದಿಂದ ನಾವು ಮಾರ್ಗದರ್ಶನ ಪಡೆಯಬೇಕು. ಅಲ್ಲಿ 13 ವರ್ಷಗಳ ಕಾಲ ಮುಸ್ಲಿಮರು ಎಲ್ಲ ರೀತಿ ಹಿಂಸೆ-ದೌರ್ಜನ್ಯಗಳಿಗೆ ಗುರಿಯಾಗುತ್ತಲಿದ್ದರು. ಪ್ರವಾದಿಯವರು(ಸ) ಈ ಅವಧಿಯಲ್ಲಿ ಎಲ್ಲ ಸಂಕಷ್ಟಗಳು ಮತ್ತು ಅಡೆತಡೆಗಳ ಹೊರತಾಗಿಯೂ ಸತ್ಯಧರ್ಮದ ಪ್ರಚಾರದ ಕಾರ್ಯವನ್ನು ಅನೂಚಾನವಾಗಿ ನಿರ್ವಹಿಸುತ್ತಾ ಬಂದರು. ಹಿಂಸೆಗೆ ಪ್ರತಿಯಾಗಿ ಎಂದೂ ಹಿಂಸೆಯ ಮಾರ್ಗವನ್ನು ಪ್ರವಾದಿ(ಸ) ಅವಲಂಬಿಸಲಿಲ್ಲ. ಮಕ್ಕಾದ ಆಡಳಿತ ವರ್ಗದ ಕಡೆಯಿಂದ ಮುಸ್ಲಿಮರ ಮೇಲೆ ಮಿತಿಮೀರಿದ ದೌರ್ಜನ್ಯಗಳನ್ನೆಸಗಲಾಯಿತು. ಭಯೋತ್ಪಾದನೆಯ ವಿವಿಧ ರೂಪಗಳನ್ನು ಅವರ ವಿರುದ್ಧ ಬಳಸಲಾಯಿತು. ದಿಗ್ಬಂಧನ, ಯಾತನೆ ಮತ್ತು ಕೊಲೆ ಎಲ್ಲ ಘಟ್ಟಗಳನ್ನೂ ಮುಸ್ಲಿಮರು ಎದುರಿಸಬೇಕಾಯಿತು. ಈ ಸಂಘರ್ಷಕ್ಕೆ ಇದ್ದ ಏಕೈಕ ಕಾರಣವೇನೆಂದರೆ ಪ್ರವಾದಿಯವರು(ಸ) ಜನರನ್ನು ಒಳಿತಿನ ಕಡೆಗೆ ಆಹ್ವಾನಿಸುತ್ತಿದ್ದರು, ಕೆಡುಕಿನಿಂದ ಅವರನ್ನು ತಡೆಯುತ್ತಿದ್ದರು ಮತ್ತು ವಿಶ್ವಾಸ-ಶ್ರದ್ಧೆಯ ನೆಲೆಯಲ್ಲಿ ಎಲ್ಲ ರೀತಿಯ

ಅನ್ಯಾಯಗಳಿಂದ ತಮ್ಮ ಸಮಾಜವನ್ನು ಪವಿತ್ರಗೊಳಿಸ ಬಯಸಿದ್ದರು. ಹ. ಉಮರ್ ಮತ್ತು ಹ. ಹಮ್‌ಝಾರವರ(ರ) ಇಸ್ಲಾಮ್ ಸ್ವೀಕಾರದ ಬಳಿಕ ಕುರೈಶರ ಹಿಂಸೆಯ ಉತ್ತರ ಹಿಂಸೆಯಿಂದ ನೀಡಬಹುದಾಗಿತ್ತು. ಆದರೆ ಪ್ರವಾದಿಯವರು(ಸ) ಸದಾ ಸಂಯಮವನ್ನು ಪಾಲಿಸುವಂತೆ ಉಪದೇಶಿಸಿದರು-

"ನಿಮ್ಮ ಪ್ರಭುವಿನ ನಾಮವನ್ನು ಸ್ಮರಿಸುತ್ತಲಿರಿ ಮತ್ತು ಎಲ್ಲರಿಂದಲೂ ಬೇರ್ಪಟ್ಟು ಕೇವಲ ಅವನಿಗೆ ಸೇರಿದವರಾಗಿರಿ. ಅವನು ಪೂರ್ವ-ಪಶ್ಚಿಮಗಳ ಒಡೆಯನು. ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ಆದುದರಿಂದ ಅವನನ್ನೇ ನಿಮ್ಮ ಕಾರ್ಯಸಾಧಕನಾಗಿ ಮಾಡಿಕೊಳ್ಳಿರಿ. ಮತ್ತು ಜನರು ಆಡುತ್ತಿರುವ ಮಾತುಗಳ ಬಗ್ಗೆ ತಾಳ್ಮೆ ವಹಿಸಿರಿ ಮತ್ತು ಸಭ್ಯ ರೀತಿಯಲ್ಲಿ ಅವರಿಂದ ಬೇರ್ಪಡಿರಿ. ಸತ್ಯವನ್ನು ತಿರಸ್ಕರಿಸುವ ಈ ಸ್ಥಿತಿವಂತರೊಂದಿಗೆ ವ್ಯವಹರಿಸುವ ಕಾರ್ಯವನ್ನು ನೀವು ನನಗೆ ಬಿಟ್ಟು ಬಿಡಿರಿ ಮತ್ತು ಇವರನ್ನು ಸ್ವಲ್ಪ ಕಾಲ ಇದೇ ಸ್ಥಿತಿಯಲ್ಲಿ ಇರಲು ಬಿಡಿರಿ." (ಪವಿತ್ರ ಕುರ್‌ಆನ್, 73:8-11)

ಓ ಮುಹಮ್ಮದರೇ! ಹೇಳಿರಿ, "ಜನರೇ, ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಪರಮ ಸತ್ಯವು ಬಂದು ಬಿಟ್ಟಿತು. ಇನ್ನು ಯಾರು ಸನ್ಮಾರ್ಗವನ್ನನುಸರಿಸುವನೋ ಅವನ ಸನ್ಮಾರ್ಗ ಪ್ರಕ್ರಿಯೆಯು ಅವನಿಗೇ ಫಲಕಾರಿಯಾಗುವುದು ಮತ್ತು ಯಾರು ಪಥಭ್ರಷ್ಟ ನಾಗಿರುವನೋ ಅವನ ಪಥಭ್ರಷ್ಟತೆಯು ಅವನಿಗೇ ಹಾನಿಕರವಾಗುವುದು ಮತ್ತು ನಾನು ನಿಮ್ಮ ಮೇಲೆ ಕೊತ್ವಾಲನೇನೂ ಅಲ್ಲ. ಓ ಪೈಗಂಬರರೇ, ನಿಮ್ಮ ಕಡೆಗೆ 'ದಿವ್ಯವಾಣಿ'ಯ ಮೂಲಕ ಅವತೀರ್ಣಗೊಳ್ಳುತ್ತಿರುವ ಸನ್ಮಾರ್ಗವನ್ನು ಅನುಸರಿಸುತ್ತಲೇ ಸಾಗಿರಿ ಮತ್ತು ಅಲ್ಲಾಹನು ತೀರ್ಮಾನ ಮಾಡುವವರೆಗೂ ತಾಳ್ಮೆವಹಿಸಿರಿ. ಅವನೇ ಅತ್ಯುತ್ತಮ ತೀರ್ಮಾನ ಮಾಡುವವನಾಗಿರುತ್ತಾನೆ." (ಪವಿತ್ರ ಕುರ್‌ಆನ್, 10:108-109)

ಮದೀನಾಕ್ಕೆ ವಲಸೆ ಹೋದ ನಂತರ ಅನ್ಯಾಯ- ಆಕ್ರಮಣಗಳಿಗೆ ಬಲಪ್ರಯೋಗಿಸಿ ಉತ್ತರ ನೀಡುವ ಅನುಮತಿ ಸಿಕ್ಕಿದ್ದು ಅಲ್ಲಿ ಒಂದು ಇಸ್ಲಾಮೀ ರಾಷ್ಟ್ರವು ಸ್ಥಾಪನೆಯಾಗಿ ಮಕ್ಕಾದ ಕುರೈಶರ ಆಕ್ರಮಣದಿಂದ ಅದರ ಅಸ್ತಿತ್ವವೇ ಅಪಾಯದಲ್ಲಿ ಸಿಲುಕಿದಾಗ ಮಾತ್ರ.

ಪವಿತ್ರ ಕುರ್‌ಆನಿನಲ್ಲಿ ಈ ಪರಿಸ್ಥಿತಿಯ ಕುರಿತು ಬಂದಿರುವ ನಿರ್ಣಾಯಕ ಆದೇಶಗಳಿಂದ ಸ್ಪಷ್ಟವಾಗುವುದೇನೆಂದರೆ ಕ್ಷೋಭೆಯನ್ನು ಸಾಮೂಹಿಕವಾಗಿ ಎದುರಿಸುವ ಮತ್ತು ಗಲಭೆಕೋರರೊಂದಿಗೆ ಸೆಣಸಾಡುವ ಬಗ್ಗೆ ಇಸ್ಲಾಮ್ ಯಾವುದೇ ರೀತಿಯ ರಿಯಾಯಿತಿ ತೋರುವುದಿಲ್ಲ.

"ತಮ್ಮ ಒಪ್ಪಂದಗಳನ್ನು ಮುರಿಯುತ್ತಲೇ ಇದ್ದು ಸಂದೇಶವಾಹಕರನ್ನು ದೇಶದಿಂದ ಹೊರಹಾಕಲು ನಿರ್ಧರಿಸಿದ ಮತ್ತು ಅತಿರೇಕವನ್ನಾರಂಭಿಸಿದವರೊಂದಿಗೆ ನೀವು ಯುದ್ಧ ಮಾಡುವುದಿಲ್ಲವೇ? ನೀವು ಅವರಿಗೆ ಹೆದರುತ್ತೀರಾ? ನೀವು ಸತ್ಯವಿಶ್ವಾಸಿ ಗಳಾಗಿದ್ದರೆ ನಿಮ್ಮ ಭಯಕ್ಕೆ ಅಲ್ಲಾಹನು ಹೆಚ್ಚು ಅರ್ಹನು. ಅವರೊಡನೆ ಯುದ್ಧ ಮಾಡಿರಿ. ಅಲ್ಲಾಹನು ನಿಮ್ಮ ಕೈಗಳಿಂದ ಅವರಿಗೆ ಶಿಕ್ಷೆ ಕೊಡಿಸುವನು, ಅವರನ್ನು

ಅವಮಾನಗೊಳಿಸುವನು, ಅವರ ವಿರುದ್ಧ ನಿಮಗೆ ಸಹಾಯ ಮಾಡುವನು. ಅನೇಕ ಸತ್ಯ ವಿಶ್ವಾಸಿಗಳ ಹೃದಯಗಳನ್ನು ತಣಿಸುವನು." (ಪವಿತ್ರ ಕುರ್‌ಆನ್, 9:13-14)

"ಯಾರ ವಿರುದ್ಧ ಯುದ್ಧ ನಡೆಸಲಾಗುತ್ತಿದೆಯೋ ಅವರಿಗೆ ಅನುಮತಿ ನೀಡಲಾಗಿದೆ. ಏಕೆಂದರೆ ಅವರು ಮರ್ದಿತರು ಮತ್ತು ನಿಶ್ಚಯವಾಗಿಯೂ ಅಲ್ಲಾಹನು ಅವರಿಗೆ ಸಹಾಯ ಮಾಡಲು ಸಮರ್ಥನು. ಇವರು, 'ನಮ್ಮ ಪ್ರಭು ಅಲ್ಲಾಹ್' ಎಂದಿಷ್ಟೇ ಹೇಳಿದ ತಪ್ಪಿಗಾಗಿ ತಮ್ಮ ಮನೆಗಳಿಂದ ಅನ್ಯಾಯವಾಗಿ ಹೊರ ಹಾಕಲ್ಪಟ್ಟವರು. ಅಲ್ಲಾಹನು ಜನರಲ್ಲಿ ಕೆಲವರನ್ನು ಬೇರೆ ಕೆಲವರ ಮೂಲಕ ನೀಗಿಸದಿರುತ್ತಿದ್ದರೆ ಅಲ್ಲಾಹನ ನಾಮವನ್ನು ಅತಿ ಹೆಚ್ಚಾಗಿ ಸ್ಮರಿಸಲಾಗುತ್ತಿರುವ ಆಶ್ರಮಗಳೂ ಇಗರ್ಜಿಗಳೂ ಯಹೂದಿಯರ ಆರಾಧನಾಲಯಗಳೂ ಮಸೀದಿಗಳೂ ಧ್ವಂಸಗೊಳ್ಳುತ್ತಿದ್ದುವು. ಯಾರು ಅಲ್ಲಾಹನಿಗೆ ಸಹಾಯ ಮಾಡುವರೋ ಅವರಿಗೆ ಅವನು ಖಂಡಿತ ಸಹಾಯ ಮಾಡುವನು. ಅಲ್ಲಾಹನು ಮಹಾ ಶಕ್ತಿವಂತನೂ ಪ್ರಬಲನೂ ಆಗಿರುತ್ತಾನೆ. (ಇವರು ಎಂಥವರೆಂದರೆ) ನಾವು ಇವರಿಗೆ ಭೂಮಿಯಲ್ಲಿ ಅಧಿಕಾರ ಪ್ರದಾನ ಮಾಡಿದರೆ ಇವರು ನಮಾಝ್ ಸಂಸ್ಥಾಪಿಸುವರು, ಝಕಾತ್ ಕೊಡುವರು, ಒಳಿತಿನ ಆಜ್ಞೆ ಕೊಡುವರು ಮತ್ತು ಕೆಡುಕಿನಿಂದ ತಡೆಯುವರು ಮತ್ತು ಸಕಲ ವ್ಯವಹಾರಗಳ ಅಂತಿಮ ಪರಿಣಾಮವು ಅಲ್ಲಾಹನ ಕೈಯಲ್ಲಿದೆ." (ಪವಿತ್ರ ಕುರ್‌ಆನ್, 22:39-41)

ಅಲ್ಲಾಹನ ಈ ಸ್ಪಷ್ಟ ಆದೇಶಗಳಿಂದ ತಿಳಿದು ಬರುವುದೇನೆಂದರೆ ಮುಸ್ಲಿಮರ ಸಾಮೂಹಿಕ ವ್ಯವಸ್ಥೆ, ಸಮಾಜ ಮತ್ತು ಆಧಿಪತ್ಯಕ್ಕೆ ಯಾರಾದರೂ ಅಪಾಯವೊಡ್ಡಿದರೆ ಅಥವಾ ಅದರ ಮೇಲೆ ದಾಳಿ ಮಾಡಿದರೆ ಅವರ ವಿರುದ್ಧ ಜಿಹಾದ್ ಮಾಡಲೇ ಬೇಕಾಗುತ್ತದೆ.

ಮಕ್ಕಾದ ಸತ್ಯನಿಷೇಧಿಗಳ ವಿರುದ್ಧ ಪ್ರವಾದಿ(ಸ) ಮತ್ತು ಅವರ ಸಂಗಾತಿಗಳ ವರ್ತನೆ ಮಕ್ಕಾದಲ್ಲಿ ಸಹನೆ, ತಾಳ್ಮೆ ಮತ್ತು ಅಹಿಂಸೆಯದ್ದಾಗಿತ್ತು. ಆದರೆ ಮದೀನಾಕ್ಕೆ ಹೋದ ಬಳಿಕ ಈ ವರ್ತನೆಯಲ್ಲಿ ಬದಲಾವಣೆಯಾಯಿತು. ಅಲ್ಲಿ ಮುಸ್ಲಿಮರಿಗೆ ಈ ಶಕ್ತಿಗಳ ವಿರುದ್ಧ ರಕ್ಷಣೆ ಅಥವಾ ಅವುಗಳನ್ನು ಸದೆಬಡಿಯುವ ಸಲುವಾಗಿ ಆಯುಧ ಎತ್ತಿಕೊಳ್ಳುವ ಅನುಮತಿ ನೀಡಲಾಯಿತು. ಇದಕ್ಕೆ ಕಾರಣವೇನೆಂದರೆ ಮಕ್ಕಾದಲ್ಲಿ ಮುಸ್ಲಿಮರು ಅದೇ ಸಮಾಜದ ಒಂದು ಭಾಗವಾಗಿದ್ದರು ಮತ್ತು ಅದರಲ್ಲಿ ವೈಚಾರಿಕ ಕ್ರಾಂತಿ ತರಲು ಪ್ರಯತ್ನಿಸುತ್ತಿದ್ದರು. ಈ ಅಹಿಂಸಾವಾದ ಒಂದು ಕಾರ್ಯಶೈಲಿ ಅಥವಾ ಧೋರಣೆಯಾಗಿರಲಿಲ್ಲ. ಇದು ಒಂದು ಧಾರ್ಮಿಕ ಮತ್ತು ತಾತ್ವಿಕ ನಿಲುವಾಗಿತ್ತು. ಆ ಸಮಾಜದಲ್ಲಿ ಮೌನ ಕ್ರಾಂತಿ ತರಲು ಈ ನಿಲುವನ್ನು ಬಿಗಿ ಹಿಡಿಯುವುದು ಅಗತ್ಯವಾಗಿತ್ತು. ಈ ಕಾಲಘಟ್ಟದಲ್ಲಿ ಮುಸ್ಲಿಮರು ತಮ್ಮ ಪ್ರವಾದಿಯ(ಸ) ನೇತೃತ್ವದಲ್ಲಿ ಏಕದೇವತ್ವದ ತಾತ್ವಿಕ ನಿಲುವಿನಲ್ಲಿ ಅಚಲವಾಗಿದ್ದರು. ಮಕ್ಕಾದ ಆಡಳಿತ ವರ್ಗದೊಡನೆ ಶಾಂತಿಯುತ ಹೋರಾಟ ನಡೆಸುತ್ತಿದ್ದರು, ಉತ್ತಮ ರೀತಿಯಿಂದ ಸಂದೇಶ ಪ್ರಚಾರ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಅವರು ಸಹನೆಯನ್ನು ಕೈಗೊಂಡಿದ್ದರು. ಅನ್ಯಾಯದ ಪ್ರತಿಯಾಗಿ ಯಾವ ಸ್ತರದಲ್ಲಿಯೂ ಹಿಂಸೆಯ ಮಾರ್ಗವನ್ನು ಅವರು ಅವಲಂಬಿಸಿರಲಿಲ್ಲ.

ಪರಹಿತಾಕಾಂಕ್ಷೆ, ಸಹಕಾರ, ಸತ್ಕರ್ಮ ಮತ್ತು ಸದ್ಗುಣಗಳ ಉಪದೇಶ ಮಾಡುವುದರ ಜತೆಗೆ ಬಡವರು ಮತ್ತು ದುರ್ಬಲ ಜನರಿಗೆ ಸಹಾಯ ಮಾಡುವುದನ್ನು ಅವರು ಮುಂದುವರಿಸಿದರು. ಆದರೆ ಸತ್ಯವಚನ ಹೇಳುವುದನ್ನು ಎಂದೂ ಕೈ ಬಿಡಲಿಲ್ಲ. ಪ್ರವಾದಿ(ಸ) ಈ ರೀತಿ ಆದೇಶಿಸಿರುವರು: "ಅಕ್ರಮಿಯಾದ ಆಡಳಿತಗಾರನ ಮುಂದೆ ಸತ್ಯವನ್ನು ನುಡಿಯುವುದು ಅತ್ಯುತ್ತಮ ಜಿಹಾದ್ ಆಗಿದೆ." ಮದೀನಾದಲ್ಲಿ ಒಂದು ಸಮಾಜ, ಅದರ ಆಡಳಿತಗಾರ ಮತ್ತು ಒಂದು ಸಲಹಾಸಮಿತಿ(ಶೂರಾ) ಅಸ್ತಿತ್ವಕ್ಕೆ ಬರುವ ತನಕ ಈ ಕಾರ್ಯಶೈಲಿಯು ಮುಂದುವರಿಯಿತು. ಇದರಿಂದ ಒಂದು ತಾತ್ವಿಕ ವಿಷಯ ತಿಳಿಯುತ್ತದೆ. ಅದೇನೆಂದರೆ ಯಾವುದೇ ಸಮಾಜದ ಆಂತರಿಕ ಸಮಸ್ಯೆಯಲ್ಲಿ ಸಹನೆ ಮತ್ತು ಸ್ಥೈರ್ಯ ಎಲ್ಲ ಪರಿಸ್ಥಿತಿಯಲ್ಲೂ ಕಡ್ಡಾಯವಾಗಿದೆ. ಇದು ಅಕ್ರಮಿಯ ಅಕ್ರಮ ಬಹಿರಂಗವಾಗುವ ತನಕ ಮತ್ತು ಸಮುದಾಯದ ನಾಯಕತ್ವವು ಅಕ್ರಮಿಯ ಅಕ್ರಮವನ್ನು ತಡೆಯಲು ಶಕ್ತವಾಗುವ ತನಕ ಮುಂದುವರಿಯುವುದು. ಸತ್ಯಧರ್ಮದ ಧ್ವಜವಾಹಕರು ಮತ್ತು ಸುಧಾರಣೆಯ ಪ್ರಯತ್ನ ಮಾಡುವ ಮರ್ದಿತರ ಸಹನೆಯೇ ಕೊನೆಗೆ ಪರಿಸ್ಥಿತಿಯ ಬೇಡಿಕೆಯಂತೆ ಸಮುದಾಯ ಅಥವಾ ಸಮಾಜದ ಅಧಿಕಾರಿಗಳು ಮತ್ತು ಶೂರಾವನ್ನು ಅಕ್ರಮಿಯ ಹಿಂಸೆಗೆ ಉತ್ತರ ನೀಡಲು ಮತ್ತು ಹಿಂಸೆಯನ್ನು ತಡೆಯಲು ಪ್ರೇರೇಪಿಸುತ್ತದೆ. ಬೇರೆ ಮಾತಿನಲ್ಲಿ ಹೇಳುವುದಾದರೆ ಹಿಂಸೆಯೊಂದಿಗೆ ಹೋರಾಡಲು ವೈಯಕ್ತಿಕ ನೆಲೆಯಲ್ಲಿ ಯಾರಿಗೂ ಅನುಮತಿಯಿಲ್ಲ. ಇಸ್ಲಾಮ್ ಒಳಿತಿನ ಆದೇಶ ಮತ್ತು ಕೆಡುಕಿನ ತಡೆಯನ್ನು ಎಲ್ಲ ಮುಸ್ಲಿಮರ ಮೇಲೆ ಒಂದು ಕಡ್ಡಾಯ ಕರ್ತವ್ಯದ ರೂಪದಲ್ಲಿ ಹೇರಿದೆ. ಆದರೆ ಈ ಬಗ್ಗೆ ಹಿಂಸೆಗಿಳಿಯಲು ಯಾರಿಗೂ ಅನುಮತಿಯಿಲ್ಲ. ದುರದೃಷ್ಟವಶಾತ್ ಈ ಕರ್ತವ್ಯದ ಸ್ಫೂರ್ತಿಯನ್ನು ಅರಿಯದವರು, ಅಗತ್ಯಕ್ಕಿಂತ ಹೆಚ್ಚು ಉತ್ಸಾಹ ತೋರುವವರು ಅಥವಾ ವರ್ಗೀಯ, ವೈಯಕ್ತಿಕ ಹಿತಾಸಕ್ತಿಗಳಿಗೆ ಇವುಗಳನ್ನು ಬಳಸುವವರು ಸಶಸ್ತ್ರ ಹೋರಾಟಕ್ಕಿಳಿಯುತ್ತಾರೆ. ಅವರು ಪರಸ್ಪರ ಜಗಳಾಡುವಂತಹ ಗುಂಪುಗಳಾಗಿ ಮಾರ್ಪಡುತ್ತಾರೆ ಮತ್ತು ತಾವಾಗಿಯೇ ಆಜ್ಞಾಧಿಕಾರಿಯ (ಉಲುಲ್ ಅಮ್ರ್) ಸ್ಥಾನವನ್ನು ವಹಿಸಿಕೊಳ್ಳುತ್ತಾರೆ. ಇದೇ ರೀತಿ ಯಾವುದೇ ಅನಧಿಕೃತ ಅಕ್ರಮಿ ಅಥವಾ ಪಥಭ್ರಷ್ಟ ರಾಜಕೀಯ ಶಕ್ತಿಯೂ ವೈಯಕ್ತಿಕ ನೆಲೆಯಲ್ಲಿ ಅಥವಾ ಸಣ್ಣಸಣ್ಣ ಗುಂಪುಗಳಾಗಿ ಸಂಘರ್ಷದ ಹಾದಿಯನ್ನು ತುಳಿಯುತ್ತದೆ. ವಸ್ತುತಃ ಇಸ್ಲಾಮ್ ಜನರ ಹೃದಯಗಳನ್ನು ಗೆಲ್ಲುತ್ತದೆ. ಅದು ಎಲ್ಲ ಮಾನವರನ್ನು ಸಂಕಷ್ಟಗಳಿಂದ ಸಂರಕ್ಷಿಸ ಬಯಸುತ್ತದೆ. ಅದು ಇಂತಹ ಹಿಂಸೆಯನ್ನು ಖಂಡಿತ ಅನುಮತಿಸುವುದಿಲ್ಲ. ಸಶಸ್ತ್ರ ಸಂಘರ್ಷ ಅಥವಾ ಹೋರಾಟದ ನಿರ್ಣಯ ಮಾಡುವ ಹಕ್ಕು ಕೇವಲ ದೇಶದ ಆಡಳಿತಗಾರರು ಮತ್ತು ಶೂರಾ(ಸಲಹಾ ಸಮಿತಿ)ಕ್ಕಿದೆ. ಜಿಹಾದ್ ಜನರ ಮಧ್ಯೆ ಅಕ್ರಮ-ಅನ್ಯಾಯಗಳ ಪರವಾನಗಿಯಲ್ಲ. ಅದು ಪರಸ್ಪರ ಸಂಘರ್ಷ ನಿರತವಾದ ಗುಂಪುಗಳಿಗೆ ಅವರು ಪರಸ್ಪರ ಭಿನ್ನತೆಗಳ ತೀರ್ಮಾನಕ್ಕಾಗಿ ಮೇಲುಗೈ ಸಾಧಿಸಲು ನೀಡಲಾಗುವ ಆಯುಧವೂ ಅಲ್ಲ.

## ಪಶ್ಚಿಮದ ನಿಲುವು

ಇಂದು ಪಾಶ್ಚಾತ್ಯರು, ಯಹೂದಿಗಳು, ಹಿಂದೂ ಫ್ಯಾಸಿಸ್ಟರು ಮತ್ತು ನಾಸ್ತಿಕ ಧರ್ಮ ವಿರೋಧಿಗಳು ಬಳಸುವ ಅತ್ಯಂತ ಸ್ವಾರಸ್ಯಕರ ಪಾರಿಭಾಷಿಕ ಪದ 'ಇಸ್ಲಾಮಿ ಭಯೋತ್ಪಾದನೆ'ಯಾಗಿದೆ. ಪ್ರಸಕ್ತ ಅಂತಾರಾಷ್ಟ್ರೀಯ ಝಿಯೋನಿಸ್ಟ್ ಮಾಧ್ಯಮಕ್ಕೆ ಮತ್ತು ಅದರ ಹೆಜ್ಜೆ ಗುರುತುಗಳಲ್ಲಿ ಸಾಗುವ ಭಾರತದ ಫ್ಯಾಸಿಸ್ಟ್ ಸಂಸ್ಕೃತಿಯ ವಾಹಕ ಮಾಧ್ಯಮಕ್ಕೆ ಇದೊಂದು ಬಹಳ ಪ್ರೀತಿಯ ಮತ್ತು ಮೆಚ್ಚುಗೆಯ ಪಾರಿಭಾಷಿಕವಾಗಿದೆ. ಶಿಲುಬೆ ಮತ್ತು ಬಾಲಚಂದ್ರದ ಶತಮಾನಗಳಷ್ಟು ಹಳೆಯದಾದ ಸಂಘರ್ಷದ ಗಾಯ ಯೂರೋಪ್‌ನಲ್ಲಿ ಕೆಲವರ ಎದೆಯಲ್ಲಿ ಈಗ ಮರುಕಳಿಸಿದೆ. ಅವರು ಅಹೋ ರಾತ್ರಿ ತಮ್ಮ ಸುಳ್ಳು ಪ್ರಚಾರದ ಮೂಲಕ ಇಸ್ಲಾಮಿಗೆ ಮಸಿ ಬಳಿಯಲು ಹೊರಟಿದ್ದಾರೆ. ಭಯೋತ್ಪಾದನೆಯನ್ನು ಇಸ್ಲಾಮ್‌ಗೆ ಸಮಾನಾರ್ಥದ ಪದವೆಂದು ಅವರು ಸಾಬೀತು ಗೊಳಿಸುತ್ತಿದ್ದಾರೆ. ಆದರೆ ಯುದ್ಧಕ್ಕಾಗಿ ಯುದ್ಧ ಅಥವಾ ಮೋಜಿಗಾಗಿ ಜಿಹಾದ್ ಮಾಡಿದ ದೃಷ್ಟಾಂತವು ಇಸ್ಲಾಮಿ ಇತಿಹಾಸದಲ್ಲಿ ಎಲ್ಲೂ ಕಾಣಸಿಗುವುದಿಲ್ಲ. ನಿಜವಾಗಿ ಇಂತಹ ರಕ್ತದಾಹಿ ದುರುಳರು ಮತ್ತು ಕೊಲೆಗಡುಕರನ್ನು ಇಸ್ಲಾಮ್ ಮಾನವತೆಯ ಅತಿದೊಡ್ಡ ಶತ್ರುಗಳೆಂದು ಸಾರುತ್ತದೆ. ಈಗ ಇಸ್ಲಾಮಿನ ಪಾಶ್ಚಾತ್ಯ ಶತ್ರುಗಳು, ಭಾರತದ ಫ್ಯಾಸಿಸ್ಟರು ಮತ್ತು ಕಮ್ಯೂನಿಷ್ಟರು ಇಸ್ಲಾಮಿನ ಜಿಹಾದ್‌ಗೆ ವ್ಯಾಖ್ಯಾನ ನೀಡಲು ಹೊರಟಿದ್ದಾರೆ. ಅವರ ದೃಷ್ಟಿಯಲ್ಲಿ ಜಿಹಾದ್ ಬಂದೂಕಿನ ಬಲದಿಂದ ಇಸ್ಲಾಮಿನ ಪ್ರಚಾರದ ಒಂದು ಉಪಾಧಿ ಮತ್ತು ವಿರೋಧಿಗಳ ಸಾಮೂಹಿಕ ಕೊಲೆಯ ಒಂದು ಶೀರ್ಷಿಕೆಯಾಗಿದೆ.

ಇತಿಹಾಸದ ಎಲ್ಲ ಘಟ್ಟಗಳಲ್ಲೂ ಜನರು ಅನ್ಯಾಯವನ್ನು ಎದುರಿಸುತ್ತಾ ಬಂದಿದ್ದಾರೆ. ದೊಡ್ಡ ಪ್ರಮಾಣದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗಿ ನ್ಯಾಯದ ಕೊಲೆ ನಡೆದಾಗಲೆಲ್ಲಾ ಜನರು ಬೇರೆ ದಾರಿಯಿಲ್ಲದೆ ಜೀವದ ಹಂಗು ತೊರೆದು ರಂಗಕ್ಕಿಳಿದಿದ್ದಾರೆ ಅಥವಾ ಭೂಗತರಾಗಿ ವಿಧ್ವಂಸಕ ಕೃತ್ಯಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ.

ನಿಕಟಪೂರ್ವದಲ್ಲಿ ವಿಭಿನ್ನ ದೇಶಗಳೊಳಗೆ ನಡೆದ ಯುದ್ಧ, ಹಿಂಸೆ, ಭಯೋತ್ಪಾದನೆ, ಅರಾಜಕತೆಯ ಘಟನೆಗಳ ಕಡೆಗೆ ದೃಷ್ಟಿ ಹಾಯಿಸಿದಾಗ ತಿಳಿದು ಬರುವುದೇನೆಂದರೆ ಅದಕ್ಕೆ ಕಾರಣ ಹೆಚ್ಚಾಗಿ ಸರಕಾರೀ ಭಯೋತ್ಪಾದನೆ ಅಥವಾ ಆಡಳಿತ ವರ್ಗದ ಅನ್ಯಾಯ-ದೌರ್ಜನ್ಯಗಳಾಗಿವೆ. ಅಲ್ಜೀರಿಯಾ, ಈಜಿಪ್ಟ್, ಟ್ಯೂನೀಶ್ಯಾ, ಲಿಬಿಯಾ ಮತ್ತು ಚೆಚ್ನಿಯಾದಲ್ಲಿ ಲಷ್ಕರಿ ಆಡಳಿತ ವರ್ಗ ಮತ್ತು ಮಾನವ ಹಕ್ಕುಗಳನ್ನು ತುಳಿಯುವ ರಾಜಕಾರಣಿಗಳ ಸ್ವಾರ್ಥದಿಂದಾಗಿ ನಿರಂತರ ರಕ್ತಪಾತಗಳಾಗುತ್ತಿವೆ. ಅಲ್ಲಿನ ಸರಕಾರಗಳು ನ್ಯಾಯಪಾಲನೆಯನ್ನು ತ್ಯಜಿಸಿದುವು. ಹಿಂಸೆ ದೌರ್ಜನ್ಯಗಳನ್ನು ತಡೆಯುವಲ್ಲಿ ವಿಫಲವಾದುವು. ಬದಲಾಗಿ ಅವುಗಳು ಸ್ವತಃ ಹಿಂಸೆ-ದೌರ್ಜನ್ಯಗಳ ಸಾಧನವಾಗಿ ಮಾರ್ಪಟ್ಟಾಗ ಶಾಂತಿಯುತ ಪರಿವರ್ತನೆಯ ಬಗ್ಗೆ ನಿರಾಶರಾಗಿ ಯುವಕರು ಆಯುಧಗಳನ್ನು ಕೈಗೆತ್ತಿಕೊಂಡರು.

ನ್ಯಾಯ ಸಿಗದೆ ಇರುವುದು ಭಯೋತ್ಪಾದನೆಯ ಹೆಚ್ಚಳದ ಅತಿದೊಡ್ಡ ಕಾರಣವಾಗಿದೆ. ಮರ್ದಿತರಿಗೆ ಮತ್ತು ಅಪರಾಧ ಕೃತ್ಯಗಳಿಗೆ ಬಲಿಯಾದವರಿಗೆ ಸರಕಾರ ನ್ಯಾಯ ದೊರಕಿಸಿ

ಕೊಡದೆ ಇದ್ದಾಗ ಜನರ ಮನದಲ್ಲಿ ಅಕ್ರಮಿಗಳ ವಿರುದ್ಧ ಪ್ರತೀಕಾರದ ಭಾವನೆಗಳು ಕೆರಳುತ್ತವೆ. ಭಾರತದಲ್ಲಿ ಕೋಮುಗಲಭೆಗಳ ಒಂದು ಭಯಾನಕ ಪರಂಪರೆ ನಡೆದಿದೆ. ಅದರಲ್ಲಿ ಪೊಲೀಸ್, ಅರೆಸೈನಿಕ ಪಡೆಗಳು ಮತ್ತು ಸರಕಾರಿ ಯಂತ್ರವು ಬಹಿರಂಗವಾಗಿ ಅಲ್ಪಸಂಖ್ಯಾತರ ಬಗ್ಗೆ ದ್ವೇಷಪೂರ್ಣವಾಗಿ ವರ್ತಿಸಿದ ಮತ್ತು ಕೊಲೆ-ದರೋಡೆಗಳಲ್ಲಿ ಭಾಗವಹಿಸಿದ ಸ್ಪಷ್ಟ ಪುರಾವೆಗಳಿವೆ. ಎಲ್ಲಿಯವರೆಗೆಂದರೆ ಅನೇಕ ತನಿಖಾ ಆಯೋಗಗಳು ಅವರನ್ನು ಅಪರಾಧಿಗಳೆಂದು ಬೊಟ್ಟು ಮಾಡಿವೆ. ಆದರೆ ಯಾವುದೇ ಸರಕಾರದಿಂದ ಯಾವನೇ ಆರೋಪಿ ಅಥವಾ ಭಯೋತ್ಪಾದಕನಿಗೆ ಶಿಕ್ಷೆ ಕೊಡಿಸಲು ಸಾಧ್ಯವಾಗದಿರುವಾಗ ಸಹಜವಾಗಿಯೇ ಜನರಲ್ಲಿ ಅತೃಪ್ತಿ ಮತ್ತು ಅಸಹನೆ ತಲೆಯೆತ್ತುತ್ತದೆ. ಅವರು ನ್ಯಾಯ ಸಿಗದಿರುವುದನ್ನು ಮತ್ತು ಬಹಿರಂಗವಾಗಿ ಅಪರಾಧಿಗಳಿಗೆ ಬೆಂಬಲ ನೀಡುವುದನ್ನು ಕಂಡು ಆಯುಧ ಕೈಗೆತ್ತುವ ತೀರ್ಮಾನ ಮಾಡಿದರೆ, ಅದನ್ನು ಅಕ್ರಮ-ಅನ್ಯಾಯಗಳ ಸಹಜ ಪ್ರತಿಕ್ರಿಯೆ ಎನ್ನಬೇಕೇ ಹೊರತು ಭಯೋತ್ಪಾದನೆ ಎನ್ನುವಂತಿಲ್ಲ.

## ಭಯೋತ್ಪಾದನೆಗೆ ಧರ್ಮವಿಲ್ಲ

ಭಯೋತ್ಪಾದನೆಯ ಮೂಲಭೂತ ಅಂಶ ಕೋಪ ಮತ್ತು ದ್ವೇಷದಿಂದ ಯೋಜನಾ ಬದ್ಧವಾಗಿ ಕಾರ್ಯಾಚರಿಸುವುದಾಗಿದೆ. ಯಾವುದಾದರೂ ಆಕ್ಷೇಪ ನಿವಾರಿಸಲಿಕ್ಕಾಗಿ, ಸರಕಾರ ಅಥವಾ ಯಾವುದಾದರೂ ರಾಜಕೀಯ ಪಕ್ಷವನ್ನು ವಿರೋಧಿಸಲಿಕ್ಕಾಗಿ, ಪತ್ರಿಕೆಗಳ ಮೂಲಕ ಪ್ರಚಾರ ಗಳಿಸಲಿಕ್ಕಾಗಿ ಭಯದ ವಾತಾವರಣ ನಿರ್ಮಿಸುವುದು, ತನ್ಮೂಲಕ ತಮ್ಮ ಬೇಡಿಕೆಗಳನ್ನು ಗಳಿಸಲು ಮಾರ್ಗ ಸುಗಮಗೊಳಿಸುವುದು, ಸರಕಾರದ ದೌರ್ಬಲ್ಯವನ್ನು ಬಹಿರಂಗ ಪಡಿಸುವುದು ಮತ್ತು ಸರಕಾರದ ಪ್ರತಿಕ್ರಿಯೆಯಲ್ಲಿ ಸಾರ್ವಜನಿಕ ಸಹಾನು ಭೂತಿಯನ್ನು ಗಳಿಸುವುದು ಅದರ ಉದ್ದೇಶವಾಗಿರುತ್ತದೆ. ಇಂತಹವರು ತಾತ್ವಿಕತೆ ಮತ್ತು ಸೈದ್ಧಾಂತಿಕತೆಯ ಮುಖವಾಡ ಧರಿಸಿರುತ್ತಾರೆ. ಆದರೆ ನಿಜವಾಗಿ ಅವರಿಗೆ ಸೂಕ್ತವಾದ ಯಾವುದಾದರೂ ಆಕ್ಷೇಪಗಳಿರುತ್ತವೆ. ಅವರ, ಅವರ ಕುಟುಂಬದ, ಜಾತಿಯ, ಜನಾಂಗದ ಅಥವಾ ಪ್ರದೇಶದ ಯಾವುದಾದರೂ ಬೇಡಿಕೆಗಳಿರುತ್ತವೆ. ತಮ್ಮ ಪ್ರದೇಶದ ಮೇಲೆ ಪ್ರಸಕ್ತ ಸರಕಾರದ ಅಮಾನವೀಯ ವರ್ತನೆ ಅದರ ಹಿಂದೆ ಇರುತ್ತದೆ. ಅದಕ್ಕಾಗಿ ಅವರು ಶಸ್ತ್ರ ಕೈಗೆತ್ತಿಕೊಳ್ಳುತ್ತಾರೆ. ಆದರೆ ಜಗತ್ತಿನ ಯಾವ ಧರ್ಮವೂ ನಿರಪರಾಧಿಗಳನ್ನು ಗುರಿಯಾಗಿಸು ವುದಕ್ಕೆ ಅನುಮತಿ ನೀಡುವುದಿಲ್ಲ. ಅದರಲ್ಲೂ ವಿಶೇಷವಾಗಿ ಇಸ್ಲಾಮ್ ಧರ್ಮವು ಯಾವುದೇ ಅನ್ಯಾಯಕ್ಕೆ ಪ್ರತಿಯಾಗಿ ಅದಕ್ಕಿಂತ ಎಷ್ಟೋ ಪಟ್ಟು ಹೆಚ್ಚು ಅನ್ಯಾಯದ ಈ ವಿಧಾನವನ್ನು ಅನುಮೋದಿಸುವುದಿಲ್ಲ. ನಿಜವಾಗಿ ಭೌತಿಕವಾದಿ ಪಾಶ್ಚಾತ್ಯ ಸಂಸ್ಕೃತಿ ಮತ್ತು ಕಮ್ಯೂನಿಸ್ಟ್ ಸಿದ್ಧಾಂತವು ಬಂದೂಕಿನ ಸಂಸ್ಕೃತಿಯನ್ನು ಬೆಳೆಸಿವೆ. ಈ ಸಂಸ್ಕೃತಿಯ ಮಡಿಲಲ್ಲಿ ಬೆಳೆದು ಯುವಕರಾದ ಹೊಸ ಪೀಳಿಗೆಯು ರಕ್ತದಾಹಿ ನರಿಗಳಾಗಿ ಮುಂದೆ ಬರುತ್ತಿದೆ.

ಇಸ್ಲಾಮ್ ಬಂದೂಕಿನ ಸಂಸ್ಕೃತಿ, ರಕ್ತಪಾತ, ಕ್ರೌರ್ಯ ಮತ್ತು ನಿರಪರಾಧಿಗಳ ಮೇಲೆ ಕೈ ಎತ್ತುವುದನ್ನೂ ಅಪರಾಧವೆಂದು ಪರಿಗಣಿಸುತ್ತದೆ. ಮಾತ್ರವಲ್ಲ ಅದು

ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಆರ್ಥಿಕ ಭಯೋತ್ಪಾದನೆಯನ್ನು ತೀವ್ರವಾಗಿ ವಿರೋಧಿಸುತ್ತದೆ. ಇಂದು ಲೋಕದ ವಿಭಿನ್ನ ರಾಷ್ಟ್ರಗಳಲ್ಲಿ ಜನಾಂಗೀಯ, ಸಾಂಸ್ಕೃತಿಕ ಮತ್ತು ಭಾಷೀಯ ಪಕ್ಷಪಾತ ಮತ್ತು ದೌರ್ಜನ್ಯಗಳ ಭಯಾನಕ ಘಟನೆಗಳು ನಡೆಯುತ್ತಿವೆ. ಇಸ್ಲಾಮಿನ ದೀರ್ಘ ಇತಿಹಾಸದಲ್ಲಿ ಇಂತಹ ಭಯೋತ್ಪಾದನೆಯ ಯಾವ ನಿದರ್ಶನವೂ ಕಾಣ ಸಿಗುವುದಿಲ್ಲ. ರಶ್ಯಾ, ಅಮೇರಿಕ, ಪಾಶ್ಚಾತ್ಯ ರಾಷ್ಟ್ರಗಳು ಮತ್ತು ಸ್ವತಃ ಭಾರತದಲ್ಲೂ ಪ್ರಜಾಸತ್ತೆ, ಉದಾರವಾದ, ಮಾನವ ಪ್ರೇಮದ ನೆರಳಲ್ಲಿ ಎಂತೆಂತಹ ಸಾಂಸ್ಕೃತಿಕ ದೌರ್ಜನ್ಯಗಳು ನಡೆಯುತ್ತಿವೆಯೆಂದರೆ ಅದನ್ನು ಕಂಡು ಆಶ್ಚರ್ಯವಾಗುತ್ತದೆ. ಜನರು ಸರಕಾರದ ನೆರವಿನಿಂದ ಇತರರ ಭಾಷೆ ಮತ್ತು ಸಂಸ್ಕೃತಿಯನ್ನು ತುಳಿದು ಹಾಕಲು ಮತ್ತು ಅವುಗಳನ್ನು ಗಡೀಪಾರುಗೊಳಿಸಲು ಪ್ರಯತ್ನಿಸುತ್ತಿದ್ದಾರೆ.

ಅಂತಾರಾಷ್ಟ್ರೀಯ ದೃಶ್ಯಾವಳಿಯಲ್ಲಿ ದ್ವಿತೀಯ ಮಹಾಯುದ್ಧದ ವೇಳೆ ಪಶ್ಚಿಮದ ಮೇಲೆ ನಾಝಿಝಮ್‌ನ ಭೂತ ಎರಗಿತ್ತು. ಅನಂತರ ಕಮ್ಯೂನಿಸಮ್‌ನ ಭೂತವು ಅದರ ನಿದ್ರೆ ಕೆಡಿಸುತ್ತಿತ್ತು. ಈ ಎರಡೂ ಶಕ್ತಿಗಳು ಒಡೆದು ನುಚ್ಚು ನೂರಾದ ಬಳಿಕ ಪಶ್ಚಿಮವು ಒಂದು ಶತ್ರುವಿನ ಹುಡುಕಾಟದಲ್ಲಿತ್ತು. ಪಶ್ಚಿಮವು ಇತಿಹಾಸದ ಭೂಗರ್ಭದಲ್ಲಿ ಅದನ್ನು ಕಂಡು ಕೊಂಡಿತು. ಸಲಾಹುದ್ದೀನ್ ಅಯ್ಯೂಬಿಯವರ ಹೊಳೆಯುತ್ತಿರುವ ಖಡ್ಗ ಅವರ ಕಲ್ಪನಾ ಲೋಕದಲ್ಲಿ ತೊನೆದಾಡತೊಡಗಿತು. ಅವರು ಶತಮಾನಗಳ ಹಿಂದೆ ಬೈತುಲ್ ಮಕ್ದಿಸ್‌ನ ಸಂರಕ್ಷಣೆ ಮತ್ತು ಅದರ ಪಾವಿತ್ರ್ಯವನ್ನು ಪುನಃಸ್ಥಾಪಿಸಲಿಕ್ಕಾಗಿ ರಿಚರ್ಡ್ ಥರ್ಡ್‌ನ ನಾಯಕತ್ವದಲ್ಲಿ ಇಡೀ ಕ್ರೈಸ್ತ ಜಗತ್ತು ಮತ್ತು ಯುರೋಪಿನ ಯುದ್ಧದ ಅಂಗಿ ತೊಟ್ಟ ಶಕ್ತಿಗಳಿಗೆ ಹೀನಾಯ ಸೋಲು ಉಣಿಸಿದ್ದರು. ಅನಂತರ ಯುರೋಪಿನ ಝಿಯೋನಿಸ್ಟ್ ಮಾಧ್ಯಮವು ಇಸ್ಲಾಮಿನ ಎಂತಹ ಭಯಾನಕ ಚಿತ್ರಗಳನ್ನು ಮುಂದಿಟ್ಟಿತೆಂದರೆ ಈಗ ಮಾನವ ಲೋಕಕ್ಕೆ ಅತಿ ದೊಡ್ಡ ಪಂಥಾಹ್ವಾನ ಇಸ್ಲಾಮ್ ಮತ್ತು ಮುಸ್ಲಿಮರಾಗಿ ಮಾರ್ಪಟ್ಟಿತು. ಜಾನ್ ಎಲ್ ಎಸ್ಪಾಸಿಟೋ ಅವರು ತಮ್ಮ "The Islamic Threat" ಎಂಬ ಗ್ರಂಥದಲ್ಲಿ ಪಶ್ಚಿಮದ ಈ ಭಯೋತ್ಪಾದನೆಯನ್ನು ಹೀಗೆ ಚಿತ್ರಿಸಿರುವರು:

"ಮುಸ್ಲಿಮರು ಬರುತ್ತಿದ್ದಾರೆ, ಮುಸ್ಲಿಮರು ಬರುತ್ತಿದ್ದಾರೆ ಎಂಬುದು ಪಶ್ಚಿಮದ ಭಯ ಮತ್ತು ಭೀತಿಯ ಒಂದು ವ್ಯಂಗ್ಯಾತ್ಮಕ ದೃಶ್ಯ ಮತ್ತು ಒಂದು ಉತ್ಪ್ರೇಕ್ಷಾತ್ಮಕ ಚಿತ್ರವಾಗಿದೆ. ಆದರೂ ಅಮೇರಿಕದ ಉಪಾಧ್ಯಕ್ಷ ಡಾನ್ ಕ್ವ್ಯಾಯಲ್ ತೀವ್ರವಾದಿ ಇಸ್ಲಾಮೀ ಮೂಲಭೂತವಾದದ ಅಪಾಯದ ಕುರಿತು ಚರ್ಚಿಸುತ್ತಾರೆ. ಅದರ ಸಂಬಂಧವನ್ನು ಫ್ಯಾಸಿಸಮ್ ಮತ್ತು ಕಮ್ಯೂನಿಸಮ್‌ನ ಜತೆ ಜೋಡಿಸುತ್ತಾರೆ. ಪ್ರಜಾಸತ್ತೆಯೊಂದಿಗೆ ಅದಕ್ಕಿರುವ ವೈರುಧ್ಯವನ್ನು ವಿವರಿಸಲಾಗುತ್ತದೆ. ಬೋಸ್ಟನ್‌ಗ್ಲೋಬ್ 'ಇಸ್ಲಾಮಿನ ಮೇಲೆ ಇಸ್ಲಾಮಿನ ಖಡ್ಗ'ದ ಶೀರ್ಷಿಕೆಯಲ್ಲಿ ಧಾರಾವಾಹಿ ಲೇಖನಗಳನ್ನು ಆರಂಭಿಸುತ್ತಾನೆ. ಆಗ ವಾಸ್ತವಿಕತೆಯು ಎಲ್ಲಿ ಮುಗಿಯುತ್ತದೆ ಎಂಬುದನ್ನು ಅರಿಯುವುದು ಕಷ್ಟವಾಗುತ್ತದೆ. (The Islamic Threat- Oxford University Press, New York 1993-P.168)

ಮುಸ್ಲಿಮ್ ರಾಷ್ಟ್ರಗಳಲ್ಲಿ ಕೆಲವು ಸರ್ವಾಧಿಕಾರಿ ಆಡಳಿತಗಳು ಮತ್ತು ಅಮೇರಿಕದ ಇಚ್ಛೆಯ ವಿರುದ್ಧ ನಡೆದ ಕ್ರಾಂತಿಗಳ ನೆಪದಲ್ಲಿ ಪಶ್ಚಿಮವು ಇಡೀ ಮುಸ್ಲಿಮ್ ಜಗತ್ತು ಮತ್ತು ಇಡೀ ಮುಸ್ಲಿಮ್ ಸಮುದಾಯವನ್ನು ಅತ್ಯಂತ ಲಜ್ಜಾಹೀನವಾಗಿ ಶಪಿಸಲು ಮತ್ತು ಹಂಗಿಸಲು ಆರಂಭಿಸಿದ್ದು ಆಧುನಿಕ ಜಗತ್ತಿನ ಇತಿಹಾಸದ ಒಂದು ದುರಂತವಾಗಿದೆ. ಸ್ವಾರಸ್ಯವೇನೆಂದರೆ ಲೋಕದ ಅನೇಕ ಕಡೆಗಳಲ್ಲಿ ಅದು ತನ್ನ ಸಿ.ಐ.ಎ. ಸಂಸ್ಥೆಯ ಮೂಲಕ ಅಪರಾಧೀ ಮತ್ತು ಒಳಸಂಚಿನ ಕೃತ್ಯಗಳನ್ನು ಮಾಡಿಸಿ ಈ ಯುಗದ ಇತಿಹಾಸವನ್ನು ರಕ್ತರಂಜಿತಗೊಳಿಸಿದೆ. ಎಸ್ಪಾಸಿಟೋ ಅವರ ಮಾತಿನಲ್ಲಿ ಹೇಳುವುದಾದರೆ, "ಪಶ್ಚಿಮದ ವ್ಯಾಪಾರೀ ಮತ್ತು ವಸಾಹತುಶಾಹೀ ಹಿತಾಸಕ್ತಿಗಳಿಗೆ ಸ್ವಲ್ಪವಾದರೂ ಹೊಡೆತ ಬೀಳುವ ಭಯವಿದ್ದರೆ ತನ್ನ ಶತ್ರು ರಾಷ್ಟ್ರಗಳ ವಿರುದ್ಧ ಸವಕಲು ಅಪವಾದಗಳ ಪೆಟ್ಟಿಗೆ ತೆರೆದು ತರತರದ ವಿಪತ್ತುಗಳನ್ನು ಹೊರ ತೆಗೆದು ಅದಕ್ಕೆ ಇಸ್ಲಾಮ್ ಅಥವಾ ಕಮ್ಯೂನಿಸಮ್‌ನ ಹಣೆಪಟ್ಟಿ ಕಟ್ಟಿ ಪ್ರಸ್ತುತಪಡಿಸುವುದು ಪಶ್ಚಿಮದ ಅಭ್ಯಾಸವಾಗಿ ಬಿಟ್ಟಿದೆ. ಕೊಲ್ಲಿ ಯುದ್ಧದ ಸಂದರ್ಭದಲ್ಲಿ ಅಮೇರಿಕವು ಹೊಸ ವಿಶ್ವವ್ಯವಸ್ಥೆಯ ಸಂದೇಶ ಹೊತ್ತು ಮುಂದೆ ಬರುವುದರಲ್ಲಿತ್ತು. ಮಾನವ ಹಕ್ಕುಗಳು, ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆಯ ಪ್ರಗತಿಯ ಬಗ್ಗೆ ಅದಕ್ಕೆ ಪೂರ್ವ ಯೂರೋಪ್, ಏಶ್ಯಾ ಮತ್ತು ಆಫ್ರಿಕಾದಲ್ಲಿ ಬಹಳ ಕಾಳಜಿಯಿತ್ತು. ಆದರೆ ಆ ದೇಶಗಳ ಮುಸ್ಲಿಮ್ ಪ್ರಜೆಗಳು ತಮ್ಮ ಮತಗಳ ಮತ್ತು ಸಾರ್ವತ್ರಿಕ ಬಯಕೆಯ ಪ್ರಕಾರ ಪಶ್ಚಿಮದ ನಾಸ್ತಿಕ ಪ್ರಜಾಸತ್ತೆಯ ಬದಲು ಇಸ್ಲಾಮಿನ ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಸ್ಥಾಪಿಸ ಬಯಸಿದರೆ ಅದೇ ಅಮೇರಿಕ ಅತ್ಯಂತ ಭಯಭೀತವಾಗಿ ಬಿಡುತ್ತದೆ. ಆದ್ದರಿಂದ ಮುಸ್ಲಿಮ್ ರಾಷ್ಟ್ರಗಳ ನಿರ್ದಯ, ಚಾರಿತ್ರಹೀನ, ಸ್ವಾರ್ಥಿ, ವಂಚಕ, ಸರ್ವಾಧಿಕಾರಿ ಮತ್ತು ಲಷ್ಕರಿ ಶಾಸಕರನ್ನು ಇದೇ ಪ್ರಜಾಸತ್ತೆಯ ವಾಹಕವಾದ ಅಮೇರಿಕ ಪೂರ್ಣವಾಗಿ ಬೆಂಬಲಿಸಿತು. ತನ್ಮೂಲಕ ಅವರು ತಮ್ಮ ದೇಶಗಳ ಜನಾಭಿಪ್ರಾಯವನ್ನು ತುಳಿದು ಹಾಕಿದರು. ಟ್ಯೂನೀಶ್ಯಾ, ಅಲ್ಜೀರಿಯಾ ಮತ್ತು ಈಜಿಪ್ಟ್‌ನಲ್ಲಿ ಅಮೇರಿಕವು ಯಾವ ರೀತಿಯ ಸರ್ವಾಧಿಕಾರಿಗಳನ್ನು ಅಲ್ಲಿನ ಪ್ರಜೆಗಳ ಮೇಲೆ ತನ್ನ ಪೂರ್ಣ ಬೆಂಬಲದೊಂದಿಗೆ ಹೇರಿದೆ ಮತ್ತು ಅವರು ಯಾವ ರೀತಿ ರಕ್ತದೋಕುಳಿ ಮಾಡುತ್ತಿದ್ದಾರೆಂಬುದನ್ನು ಜಗತ್ತು ಚೆನ್ನಾಗಿ ಅರಿತಿದೆ.

ಇಸ್ಲಾಮೀ ಭಯೋತ್ಪಾದನೆಯು ನಿಜಕ್ಕೂ ಒಂದು ಜಾಗತಿಕ ಅಪಾಯವಾಗಿದೆ ಎಂಬ ಬಗ್ಗೆ ಇಂದು ಪಶ್ಚಿಮವೂ ಒಮ್ಮತಕ್ಕೆ ಬಂದಿಲ್ಲ. ಅನೇಕ ಪಾಶ್ಚಾತ್ಯ ಚಿಂತಕರು ಅದನ್ನು ಒಂದು ಕಾಲ್ಪನಿಕ ಭೂತವೆಂದು ಬಗೆಯುತ್ತಾರೆ. ಆದರೆ ಸಾಮಾನ್ಯ ಮುಸ್ಲಿಮೇತರರ ಮನಸ್ಸಿನಲ್ಲಿ ಒಂದು ಮಾತು ಬೇರೂರಿ ಬಿಟ್ಟಿದೆ. ಮಾಧ್ಯಮವು ಅದನ್ನು ದೃಢಗೊಳಿಸುತ್ತಿದೆ. ಇಸ್ಲಾಮ್ ಒಂದು ದೊಡ್ಡ ಅಪಾಯವಾಗಿದೆ. ಮುಸ್ಲಿಮ್ ಜಗತ್ತು ಮತ್ತು ಕ್ರೈಸ್ತ ಜಗತ್ತಿನ ಮಧ್ಯೆ ಸದ್ಯೋಭವಿಷ್ಯದಲ್ಲಿ ಒಂದು ಭಯಾನಕ ಯುದ್ಧ ನಡೆಯಲಿಕ್ಕಿದೆ. ಇಂತಹ ಭಾವನೆಯನ್ನು ಸೃಷ್ಟಿಸುವುದರಲ್ಲಿ ಒಂದು ಪ್ರತ್ಯೇಕ ವರ್ಗದ ಜನರು ಬಹಳ ಗಣನೀಯ ಪಾತ್ರ ವಹಿಸಿದ್ದಾರೆ. ದುರದೃಷ್ಟವಶಾತ್ ಈ ವರ್ಗಕ್ಕೆ ಜಾಗತಿಕ ಮಾಧ್ಯಮದ ಬೆಂಬಲ

ಸಿಕ್ಕಿದೆ. ಆದ್ದರಿಂದ ಅವರ ಲೇಖನಿಗಳಿಂದ ಹೊರಟ ಪದಗಳು ವಾಸ್ತವಿಕತೆಯ ಪ್ರಕಟನೆಯಾಗಿರಲಿ ಅಥವಾ ಕೇವಲ ಅವರ ಬುದ್ಧಿಯ ಸೃಷ್ಟಿಯಾಗಿರಲಿ, ಅದು ಇಡೀ ಜಗತ್ತಿನ ಮೇಲೆ ಪ್ರಭಾವ ಬೀರುತ್ತದೆ. ಕೆಲವೆಡೆ ತಾರ್ಕಿಕ ವಾದಗಳ ಮೂಲಕ, ಇನ್ನು ಕೆಲವೆಡೆ ಒಂಟಿ ಘಟನೆಗಳನ್ನು ಸಾರ್ವತ್ರಿಕಗೊಳಿಸುವ ಮೂಲಕ, ಕೆಲವೆಡೆ ತತ್ವಶಾಸ್ತ್ರಗಳನ್ನು ಹುಟ್ಟುಹಾಕಿ, ಇನ್ನು ಕೆಲವೆಡೆ ತಮ್ಮ ವಾಕ್‌ಚಾತುರ್ಯ ಮತ್ತು ಮಾಧ್ಯಮಗಳಲ್ಲಿ ಇಸ್ಲಾಮ್ ಮತ್ತು ಕ್ರೈಸ್ತ ಧರ್ಮವು ಸದಾ ಶತ್ರುಗಳಾಗಿವೆ ಎಂಬ ಮಿಥ್ಯೆಯನ್ನು ಹರಡುವ ಮೂಲಕ!

ಇರಾನ್ ಒಂದು ಚಿಕ್ಕ ರಾಷ್ಟ್ರ. ಅದು ತನ್ನದೇ ಆದ ಸಮಸ್ಯೆಗಳಲ್ಲಿ ಸಿಲುಕಿದೆ. ಆದರೆ ಅದರ ಬಗ್ಗೆ ಅಮೇರಿಕ ವಿದೇಶಾಂಗ ಸಚಿವರ ಅಭಿಪ್ರಾಯ ಹೀಗಿದೆ:

"ಇರಾನ್ ಜಗತ್ತಿನ ಅತಿದೊಡ್ಡ ಭಯೋತ್ಪಾದನೆಯ ಪೋಷಕ ರಾಷ್ಟ್ರವಾಗಿದೆ."

(America & Political Islam-Cambridge University Press - P-45)

ಇರಾನ್ ಜಗತ್ತಿನ ಅತಿದೊಡ್ಡ ಭಯೋತ್ಪಾದನೆಯ ಪೋಷಕ ರಾಷ್ಟ್ರ ಹೇಗಾಗುತ್ತದೆಂಬುದು ಒಂದು ಚರ್ಚಾಸ್ಪದ ವಿಷಯವಾಗಿದೆ. ಇದೇ ರೀತಿ ವಿಶ್ವವ್ಯಾಪಾರ ಕೇಂದ್ರದ ಮೇಲೆ ದಾಳಿಯಾದಾಗ ಜಾರ್ಜ್ ಬುಶ್‌ರನ್ನು ವಿಮರ್ಶಿಸಲಾಯಿತು. ಇದು ಪಶ್ಚಿಮ ಏಶ್ಯಾದಲ್ಲಿ ಹೆಚ್ಚುತ್ತಿರುವ ಭಯೋತ್ಪಾದನೆ ಮತ್ತು ವಿಶೇಷವಾಗಿ ಲೆಬನಾನ್‌ನಲ್ಲಿ ಹಿಝ್ಬುಲ್ಲಾಹ್‌ನ ಭಯೋತ್ಪಾದನೆಯ ಪರಿಣಾಮವಾಗಿದೆ. ಇದು ಅಮೇರಿಕದ ಅಧ್ಯಕ್ಷ ಪಶ್ಚಿಮ ಏಶ್ಯಾದಲ್ಲಿ ಭಯೋತ್ಪಾದನೆಯನ್ನು ತಡೆಯುವಲ್ಲಿ ವಿಫಲವಾದುದರ ಪರಿಣಾಮವಾಗಿದೆ. (America & Political Islam, P-47)

ಪಶ್ಚಿಮದಲ್ಲಿ ಹೆಚ್ಚೆಚ್ಚು ಅಣು ಶಕ್ತಿಯನ್ನು ಹೊಂದಲು ನಡೆಯುತ್ತಿರುವ ಪೈಪೋಟಿಗೆ ಕಾರಣ ಇಸ್ಲಾಮ್ ಆಗಿದೆ ಎಂದು ಹೆಂಟಿಂಗ್‌ಟನ್ ಅವರು ಅಂಕಿ ಅಂಶಗಳ ಆಧಾರದಲ್ಲಿ ಸಾಬೀತುಪಡಿಸಿದ್ದಾರೆ-

ಪಶ್ಚಿಮದಲ್ಲಿ ಅಣುಶಕ್ತಿಯಲ್ಲಿ ಹೆಚ್ಚಳ, ಭಯೋತ್ಪಾದನೆ ಮತ್ತು ಯುರೋಪಿನಲ್ಲಿ ಆಗುತ್ತಿರುವ ಅನಪೇಕ್ಷಿತ ವಲಸೆಗೆ ಕಾರಣ ಇಸ್ಲಾಮ್ ಆಗಿದೆ ಎಂದು ನಂಬಲಾಗುತ್ತದೆ.

(Clash of Civilizations, P-215)

ಅಫಘಾನಿಸ್ತಾನವು ತನ್ನ ದುರವಸ್ಥೆಯ ಕೊನೆಯ ಅಂಚಿನಲ್ಲಿದೆ. ಆದರೆ ಮಾಧ್ಯಮಗಳು ಅದನ್ನು ಭಯೋತ್ಪಾದನೆಯ ತವರೂರೆಂದು ಬೊಬ್ಬೆ ಹಾಕಿತು. ಇಡೀ ಜಗತ್ತು ಅದರ ಬಗ್ಗೆ ಭಯಭೀತಿಗೆ ಒಳಗಾಯಿತು. ಕೊನೆಗೆ ಅದರ ವಿರುದ್ಧ ಒಂದು ಜಾಗತಿಕ ಒಕ್ಕೂಟವನ್ನು ರಚಿಸಿ ಅದನ್ನು ಅಮೇರಿಕಾ ತನ್ನ ಬಾಂಬ್ ದಾಳಿಗಳ ಮೂಲಕ ಸ್ಮಶಾನ ಭೂಮಿಯಾಗಿ ಮಾರ್ಪಡಿಸಿತು. ಇನ್ನು ಅಫಘಾನ್ ತನ್ನ ಪೂರ್ವಸ್ಥಿತಿಗೆ ಮರಳಲು ಶತಮಾನಗಳೇ ಬೇಕಾಗ ಬಹುದೇನೋ?

ಇದೆಲ್ಲಕ್ಕೂ ಕಾರಣ ಸೆಪ್ಟೆಂಬರ್ 11ರಂದು ಅಮೇರಿಕದ ವಿಶ್ವ ವಾಣಿಜ್ಯ ಕೇಂದ್ರದಲ್ಲಿ ನಡೆದ ಸ್ಫೋಟವಾಗಿದೆ. ಅದಕ್ಕೆ ಕಾರಣಕರ್ತನೆಂದು ಉಸಾಮಾ ಬಿನ್ ಲಾದನ್‌ನ ಕಡೆಗೆ ಬೊಟ್ಟು ಮಾಡಲಾಯಿತು.

ಅಂದಿನಿಂದ ಅಮೇರಿಕ ತಾಲಿಬಾನ್‌ನ ವಿರುದ್ಧ ಕತ್ತಿ ಮಸೆಯಲು ಆರಂಭಿಸಿತ್ತು. ತಾಲಿಬಾನ್‌ನ ನಿಲುವು ಏನಾಗಿತ್ತೆಂದರೆ ಉಸಾಮಾ ಈ ಸ್ಫೋಟಕ್ಕೆ ಕಾರಣಕರ್ತನಲ್ಲ. ಆತ ಕಾರಣಕರ್ತನೆಂದು ಅಮೇರಿಕ ಭಾವಿಸುವುದಾದರೆ ಆತನ ಕೈವಾಡದ ಸ್ಪಷ್ಟ ಪುರಾವೆ ಒದಗಿಸಬೇಕು ಅಥವಾ ಅಮೇರಿಕ ಉಸಾಮಾನ ವಿರುದ್ಧ ದಾವೆ ಹೂಡಿ ಮೊಕದ್ದಮೆ ನಡೆಸಬೇಕು. ನ್ಯಾಯಾಲಯದ ಯಾವುದೇ ತೀರ್ಪನ್ನು ನಾವು ಒಪ್ಪಿಕೊಳ್ಳುವೆವು. ಆದರೆ ಇದಾವುದೂ ಅಮೇರಿಕಕ್ಕೆ ಒಪ್ಪಿಗೆಯಾಗಲಿಲ್ಲ. ಅದಕ್ಕೆ ಉಸಾಮಾ ಜೀವಂತ ಅಥವಾ ಮೃತ ಸ್ಥಿತಿಯಲ್ಲಿ ಬೇಕಾಗಿತ್ತು. ಅದಕ್ಕಾಗಿ ಅದು ಅಫಘಾನಿಸ್ತಾನದ ಸರ್ವನಾಶ ಮಾಡಿತ್ತಾದರೂ ಈತನಕ ಉಸಾಮಾ ಅದರ ಕೈಗೆಟಕಲಿಲ್ಲ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಪಶ್ಚಿಮದ ಎಲ್ಲ ದೇಶಗಳಲ್ಲೂ ಒಂದು ಶಾಂತಿಯುತ ಮುಸ್ಲಿಮ್ ಸಮಾಜವು ನೆಲೆಸಿರುವುದನ್ನು ಕಾಣಬಹುದು. ಅವರು ಅತ್ಯುನ್ನತ ಮಟ್ಟದ ತಾಂತ್ರಿಕ, ವೈದ್ಯಕೀಯ ಸೇವೆಗಳನ್ನು ಸಲ್ಲಿಸುತ್ತಾ ವ್ಯಾಪಾರೀ ಮತ್ತು ಸೇವಾ ರಂಗಗಳಲ್ಲಿ ನಿರತರಾಗಿ ತಮ್ಮ ಅನ್ಯ ಧರ್ಮೀಯ ಸೋದರರೊಂದಿಗೆ ಶಾಂತಿಯುತ ಸಹಬಾಳ್ವೆ ನಡೆಸುತ್ತಾ ಇರುವುದನ್ನು ಪಶ್ಚಿಮವು ನೋಡಿದೆ. ಆದರೂ ಅವರ ಬಗ್ಗೆ ಲೇಖಕರ ಮತ್ತು ಮಾಧ್ಯಮಗಳ ಲೇಖನಗಳಲ್ಲಿ ರಕ್ತದ ಶೀರ್ಷಿಕೆ ಏಕಿದೆ? ಜಾನ್ ಎಸ್ಪಾಸಿಟೋ ಅವರ ಮಾತಿನಲ್ಲಿ:

"ಇಸ್ಲಾಮ್ ಮತ್ತು ಮುಸ್ಲಿಮರ ಚಿತ್ರವನ್ನು ಕಳೆದ 14 ದಶಮಾನಗಳಲ್ಲಿ ಗಲಭೆಕೋರ, ಕಲಹ ಪ್ರಿಯ ಮತ್ತು ಯುದ್ಧ ಪ್ರಿಯರ ರೂಪದಲ್ಲಿ ಚಿತ್ರಿಸಲಾಗಿದೆ. ಇಸ್ಲಾಮ್ ಆಕ್ರಮಣಕಾರಿಯಾಗಿದೆ. ಮುಸ್ಲಿಮರ ಕೃತ್ಯಗಳನ್ನು ಆಕ್ರಮಣಕಾರಿಯಾಗಿ ಮಾಡಿ ತೋರಿಸಲಾಗುತ್ತದೆ. ಎಲ್ಲ ದಾಳಿ, ಜಿಹಾದ್ ಮತ್ತು ದಿಗ್ವಿಜಯಗಳಿಗೆ ಅವರೇ ಕಾರಣಕರ್ತರೆಂದು ಬಿಂಬಿಸಲಾಗುತ್ತದೆ. ಅದೇ ಸಮಯದಲ್ಲಿ ಪಶ್ಚಿಮವನ್ನು ರಕ್ಷಣೆ ಮಾಡುವ ತನ್ನ ಮೇಲೆ ಆದ ಆಕ್ರಮಣಕ್ಕೆ ಉತ್ತರ ನೀಡುವ, ಶಿಲುಬೆ ಯುದ್ಧ ಮಾಡುವ ಮತ್ತು ತಮ್ಮಿಂದ ಕಸಿಯಲಾದ ನೆಲವನ್ನು ಮರಳಿ ಪಡೆಯುವ ಅಮಾಯಕ ವರ್ಗವೆಂಬ ರೂಪದಲ್ಲಿ ಪ್ರಸ್ತುತ ಪಡಿಸಲಾಗಿದೆ." (The Islamic Threat, P- 178)

ಪಾಶ್ಚಾತ್ಯದ ದೃಷ್ಟಿಕೋನವನ್ನು ಬರ್ನಾರ್ಡ್ ಲೂಯಿಸ್ ತಮ್ಮ ಪ್ರಸ್ತುತ ಗ್ರಂಥದಲ್ಲಿ ಹೀಗೆ ಸ್ಪಷ್ಟ ಪಡಿಸಿದ್ದಾರೆ:

"ಮೂಲಭೂತವಾದವು ಆಧುನಿಕತೆ, ಜಾತ್ಯತೀತತೆ, ಪಾಶ್ಚಾತ್ಯ ಬಂಡವಾಳಶಾಹಿತ್ವ ಮತ್ತು ಪ್ರಜಾಸತ್ತೆಯೊಂದಿಗೆ ಯುದ್ಧ ನಿರತವಾಗಿದೆ. ಇದು ನಿತ್ಯ ಬದಲಾಗುತ್ತಿರುವ ಆಧುನಿಕ ಜೀವನ ಶೈಲಿಯ ಸ್ಥಾನದಲ್ಲಿ ಹಿಂದಿನ ಕಾಲದ ಜೀವನ ಕ್ರಮವನ್ನು ಉಳಿಸ ಬಯಸುತ್ತದೆ."

ಪಾಶ್ಚಾತ್ಯ ಬರಹಗಾರರು ಇದನ್ನು ಎರಡು ಸಂಸ್ಕೃತಿಗಳ ಸಂಘರ್ಷವೆಂದು ಸಾರುತ್ತಾರೆ. ಅವುಗಳ ಪೈಕಿ ಒಂದು ಪುರಾತನ ಶತ್ರುವಾಗಿದೆ. ಅದು ಕ್ರೈಸ್ತ-ಯಹೂದಿ ಸಾಂಸ್ಕೃತಿಕ ಪರಂಪರೆ ಮತ್ತು ಧರ್ಮನಿರಪೇಕ್ಷ ಜೀವನ ವ್ಯವಸ್ಥೆಯನ್ನು ಜಾಗತಿಕ ಮಟ್ಟದಲ್ಲಿ ಹರಡುವುದರ ವಿರುದ್ಧ ಯುದ್ಧ ನಿರತವಾಗಿದೆ.

ಇಪ್ಪತ್ತನೆಯ ಶತಮಾನದಲ್ಲಿ ಜಾಗತಿಕ ಮಟ್ಟದಲ್ಲಿ ಆಗಿರುವ ಹಿಂಸೆ ಮತ್ತು ಭಯೋತ್ಪಾದನೆಯ ಸ್ಥಿತಿಗತಿಗಳನ್ನು ಚೆನ್ನಾಗಿ ಬಲ್ಲವರಾದ ಚಿಂತಕ ಜಾನ್ ಎಸ್ಪಾಸಿಟೋ ಅವರು ಬೊಟ್ಟು ಮಾಡಿರುವಂತೆ ಹೆಚ್ಚಿನ ಸಂಘರ್ಷ ಮತ್ತು ರಕ್ತಪಾತಗಳು ಧರ್ಮೇತರ ಕಾರಣಗಳಿಂದಾಗಿವೆ ಎಂಬುದೇ ವಾಸ್ತವ. ಅವು ಆಕ್ರಮಣಕಾರೀ ರಾಷ್ಟ್ರೀಯತೆ, ಜನಾಂಗೀಯತೆ, ಗೋತ್ರ ಪಕ್ಷಪಾತ, ರಾಷ್ಟ್ರ ಪೂಜೆ ಮತ್ತು ಭೌತಿಕ ಹಿತಾಸಕ್ತಿಗಳಾಗಿವೆ.

ಪಶ್ಚಿಮವು ಇಸ್ಲಾಮ್ ಮತ್ತು ಮುಸ್ಲಿಮರ ಸಂಬಂಧವನ್ನು ಭಯೋತ್ಪಾದನೆಯೊಂದಿಗೆ ಕಲ್ಪಿಸುವ ಹಾಗೂ ಅವರನ್ನು ಆಧುನಿಕ ಜನಾಂಗಗಳ ಸಾಲಿಗೆ ಸೇರಿಸದಿರುವ ಕಾರಣಗಳಲ್ಲಿ ಒಂದು- ಅದಕ್ಕೆ ಪ್ರಜಾಸತ್ತೆಯಲ್ಲಿ ವಿಶ್ವಾಸವಿಲ್ಲವೆಂಬುದಾಗಿದೆ. ಅವರು ಒಂದು ವೇಳೆ ಸ್ವತಂತ್ರ ಚುನಾವಣೆಯ ಮೂಲಕ ಭಾರೀ ಬಹುಮತದಿಂದ ಆಯ್ಕೆಯಾಗಿ ಪ್ರಜಾಸತ್ತೆಯ ಬೇಡಿಕೆಗಳನ್ನು ಪೂರೈಸಲಿಕ್ಕಾಗಿ ಪ್ರಜೆಗಳ ಅಭಿಮತದಂತೆ ಇಸ್ಲಾಮೀ ವ್ಯವಸ್ಥೆಯನ್ನು ಜಾರಿಗೊಳಿಸ ಬಯಸಿದರೆ ಇದು ಪಶ್ಚಿಮದ ಬುದ್ಧಿಜೀವಿಗಳ ಮಟ್ಟಿಗೆ ಅಪ್ಪಟ ಫ್ಯಾಸಿಸಮ್ ಮತ್ತು ಪ್ರಜಾಸತ್ತೆಯ ವಿರೋಧಿ ಎನಿಸುತ್ತದೆ. ಆದ್ದರಿಂದ ಪ್ರಜಾಸತ್ತೆಯಲ್ಲಿ ಚುನಾಯಿತರಾದ ಪ್ರತಿನಿಧಿಗಳು ಕಡ್ಡಾಯವಾಗಿಯೂ ಧಾರ್ಮಿಕ ಮೌಲ್ಯಗಳಿಗೆ ಯಾವುದೇ ಸಂಬಂಧವಿಲ್ಲದಂತಹ ಕಾನೂನುಗಳನ್ನು ರಚಿಸಬೇಕು. ಅದು ಕಾನೂನು ನಿರ್ಮಾಣದ ಹಕ್ಕನ್ನು ಅಲ್ಲಾಹನಿಗೆ ವರ್ಗಾಯಿಸ ಬಯಸಿದರೆ ಅದು ಅವರ ಪ್ರಕಾರ ಅತಿ ದೊಡ್ಡ ಅಪರಾಧವಾಗಿದೆ. ಪಶ್ಚಿಮದ ಓರ್ವ ಪತ್ರಕರ್ತ ಲೆಸ್ಲಿ ಗೆಲ್ಬ್ ಬರೆಯುವುದನ್ನು ನೋಡಿ:

"ಇಂದು ಎಲ್ಲ ಇಸ್ಲಾಮೀ ರಾಷ್ಟ್ರಗಳಲ್ಲಿ ಸ್ವತಂತ್ರ ಚುನಾವಣೆಗಳ ಫಲಿತಾಂಶವು ಮೂಲಭೂತವಾದಿಗಳ ವಿಜಯದ ರೂಪದಲ್ಲಿ ಬರಬಹುದು. ಈ ರೀತಿ ಧಾರ್ಮಿಕ ಸರಕಾರದ (Theocracy) ಜಾರಿಗೆ ಪರವಾನಗಿ ಒದಗಿಸಬಹುದು. ಮೂಲಭೂತವಾದಿಗಳು ಅನೇಕ ಅರಬ್ ರಾಷ್ಟ್ರಗಳಲ್ಲಿ ಸ್ವತಂತ್ರ ಚುನಾವಣೆಗಳಿಗೆ ಒತ್ತಾಯ ಹೇರುತ್ತಿದ್ದಾರೆ. ತಮ್ಮನ್ನು ತುಳಿತಕ್ಕೊಳಗಾದ ಜನರ ಸಂರಕ್ಷಕರಂತೆ ಪ್ರಸ್ತುತಪಡಿಸಿ ತಮ್ಮ ನಿರೀಕ್ಷೆಯಂತೆಯೇ ಗೆಲುವು ಸಾಧಿಸಿದ್ದಾರೆ. ಆದರೆ ಅವರು ನಿಜಕ್ಕೂ ಪ್ರಜಾಸತ್ತೆಯ ಅಭಿವೃದ್ಧಿಯ ಬಯಕೆಯನ್ನು ಹೊಂದಿದ್ದಾರೆಂಬುದು ಸಂಶಯಾಸ್ಪದವಾಗಿದೆ. ಧರ್ಮ ಮತ್ತು ರಾಜಕೀಯದ ಮಧ್ಯೆ ಇಸ್ಲಾಮ್ ಯಾವುದೇ 'ಗೆರೆ' ಎಳೆಯುವುದಿಲ್ಲ. ಸೌದಿ ಅರೇಬಿಯಾ ಒಂದು ಪ್ರಜಾಸತ್ತೆ ಇಲ್ಲದ ರಾಷ್ಟ್ರವಾಗಿದ್ದರೂ ಅದು ಪರಿಪೂರ್ಣ ಇಸ್ಲಾಮೀ ರಾಷ್ಟ್ರವಾಗಿದೆ. ಅಲ್ಲಿ ರಾಜಕೀಯ ಚಟುವಟಿಕೆಗಳಿಗೆ ಅವಕಾಶ ನೀಡಿದರೆ ಅಲ್ಲಿ ಈಗಿರುವ ಸ್ವಾತಂತ್ರ್ಯವೂ ಕಸಿಯಲ್ಪಡುವ ಸಾಧ್ಯತೆಗಳಿವೆ. ಪ್ರಜಾಸತ್ತಾತ್ಮಕ ಚಟುವಟಿಕೆಗಳ ಅನುಮತಿ ದೊರೆತ ಬಳಿಕ ಯಾವುದೇ ನಿಷ್ಪಕ್ಷಪಾತೀ ಸಾರ್ವಜನಿಕ ಹುದ್ದೆ ಅಥವಾ ಸಂಸ್ಥೆ ಅಲ್ಲಿರಲಾರದು. ಇಂತಹ ಪರಿಸರದಲ್ಲಿ ಚುನಾವಣೆಯು ಅಲ್ಲಿ ಹಾಸ್ಯಾಸ್ಪದವಾಗುವುದು."

(The Free Elections Trap- New York Times, May 29, 1991)

ಪಶ್ಚಿಮದ ದೃಷ್ಟಿಯಲ್ಲಿ ಪ್ರಜಾಸತ್ತೆಯ ಅರ್ಥವ್ಯಾಪ್ತಿ ಮತ್ತು ಅದಕ್ಕಿರುವ ಗೌರವವು ಮೇಲೆ ಉದ್ಧರಿಸಿದ ಮಾತಿನಿಂದ ಸ್ಪಷ್ಟವಾಗುತ್ತದೆ. ಅಮೇರಿಕ ತನ್ನ ಹಿತಾಸಕ್ತಿಗಳಿಗಾಗಿ ಕೆಲವು ಅರಬ್ ರಾಷ್ಟ್ರಗಳಲ್ಲಿ ಸರ್ವಾಧಿಕಾರ ಮತ್ತು ರಾಜಾಳ್ವಿಕೆಗೆ ಪ್ರಜಾಸತ್ತೆ ಮತ್ತು ಸ್ವತಂತ್ರ ಚುನಾವಣೆಗಿಂತ ಹೆಚ್ಚು ಪ್ರಾಶಸ್ತ್ಯ ನೀಡುತ್ತದೆ. ಅದಕ್ಕೆ ತನ್ನ ಸಾಂಸ್ಕೃತಿಕ ಕಾರ್ಯಸೂಚಿ ಮತ್ತು ನಾಗರಿಕ ಬುನಾದಿಗಳ ಚಿಂತೆ ಹೆಚ್ಚಿದೆ. ಆದ್ದರಿಂದ ಅದು ಯಾವುದೇ ದೇಶದಲ್ಲಿ ಎಲ್ಲ ಪ್ರಜೆಗಳ ಅಭಿಪ್ರಾಯವನ್ನು ತುಳಿದು ಕೆಲವು ಸರ್ವಾಧಿಕಾರಿಗಳು ಮತ್ತು ಅವರ ಸೈನ್ಯದ ಸಹಾಯದಿಂದ ತನ್ನ ಈ ಕಾರ್ಯಸೂಚಿಯನ್ನು ಜಾರಿಗೊಳಿಸುವುದು ಪ್ರಜಾಸತ್ತೆಯ ಬೇಡಿಕೆಯಾಗಿದೆಯೆಂದು ಸಾರಬಹುದು. ಅದರ ವಿರುದ್ಧ ಪ್ರತಿಕ್ರಿಯೆ ವ್ಯಕ್ತವಾದರೆ ಅದಕ್ಕೆ ಭಯೋತ್ಪಾದನೆ ಮತ್ತು ಫ್ಯಾಸಿಸಮ್‌ನ ಹೆಸರು ಕೊಟ್ಟು ಅದು ಮಾನವತೆಗೆ ಅಪಾಯಕಾರಿ ಎಂದು ಸಾರಬಹುದು.

ಪಶ್ಚಿಮವು ಮಧ್ಯಪೂರ್ವದಲ್ಲಿ ಪ್ರಜಾಸತ್ತೆಯನ್ನು ಹೊಸಕಿ ಹಾಕಿರುವುದು ಮತ್ತು ಇಸ್ಲಾಮೀ ಅಪಾಯದಿಂದ ಮುಕ್ತವಾದ ಪ್ರಜಾಸತ್ತೆ(Risk Free Democracy)ಯ ಪ್ರಯೋಗ ಮಾಡಿರುವುದು ಕ್ರೈಸ್ತ ಮತ್ತು ಯಹೂದಿ ಜಗತ್ತಿನ ಸಾಮ್ರಾಜ್ಯಶಾಹಿ ಮನೋಭಾವದ ಪ್ರತೀಕವಾಗಿದೆ.

ವಾಸ್ತವದಲ್ಲಿ ಇಸ್ಲಾಮ್ ಒತ್ತಾಯ-ಬಲಾತ್ಕಾರ, ಹಿಂಸೆ ಮತ್ತು ಭಯೋತ್ಪಾದನೆಯ ವಾತಾವರಣದಿಂದ ಮಾನವ ಲೋಕವನ್ನು ಹಿಂದೆಯೂ ರಕ್ಷಿಸಿತ್ತು. ಅಂದು ಅದು ಭಯ-ಭೀತಿ, ಬರ್ಬರತೆಯ ಅಂಧಕಾರಗಳಲ್ಲಿ ಮತ್ತು ಭಯಾನಕ ಸರ್ವಾಧಿಕಾರಿ ಆಡಳಿತಗಾರರ ಕಪಿಮುಷ್ಟಿಯಲ್ಲಿ ಸಿಲುಕಿತ್ತು. ಇಂದು ಕೂಡಾ ಅದುವೇ ಪ್ರಜಾಸತ್ತೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಮಾನವ ಹಕ್ಕುಗಳು ಮತ್ತು ಮಾನವನ ಘನತೆ-ಗೌರವಗಳನ್ನು ರಕ್ಷಿಸುವಲ್ಲಿ ಮಹತ್ವದ ಪಾತ್ರ ವಹಿಸಬಲ್ಲುದು. ಏಕೆಂದರೆ ಸಮಾನತೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಪರಸ್ಪರ ಸಮಾಲೋಚನೆಯಿಂದ ವ್ಯವಹಾರಗಳನ್ನು ನಡೆಸುವುದು ಮತ್ತು ಮನುಷ್ಯನ ಘನತೆ-ಗೌರವಗಳು ಅದರ ಪ್ರಕೃತಿಯಲ್ಲೇ ಸೇರಿವೆ. ಈಗ ಇಸ್ಲಾಮೀ ಜಗತ್ತಿನಲ್ಲಿ ಇಸ್ಲಾಮಿನ ಪುನರುತ್ಥಾನಕ್ಕಾಗಿ ಕೆಲಸ ಮಾಡುತ್ತಿರುವ ಸಂಘಟನೆಗಳ ಸ್ವಭಾವದಲ್ಲೂ ಪ್ರಜಾಸತ್ತೆ ಒಂದು ಮೂಲಭೂತ ಗುಣದ ರೂಪದಲ್ಲಿ ಶಾಮೀಲಾಗಿದೆ. ಅದು ಪಶ್ಚಿಮದಲ್ಲಿರುವ ಅನೈತಿಕ ಭೋಗ ವಿಲಾಸಗಳು, ಮುಕ್ತ ಕಾಮುಕತೆ ಮತ್ತು ಪೋಲಿತನವನ್ನು ಮುಸ್ಲಿಮ್ ರಾಷ್ಟ್ರಗಳಲ್ಲಿ ವ್ಯಾಪಕಗೊಳಿಸಲಿಕ್ಕಾಗಿ ನಡೆಯುವ ಯಾವುದೇ ರೀತಿಯ ಒತ್ತಾಯ-ಬಲಾತ್ಕಾರ ಮತ್ತು ಭಯೋತ್ಪಾದನೆಯ ಮುಂದೆ ತಲೆಬಾಗಿಸಲು ಸಿದ್ಧವಿಲ್ಲ. ಪಾಶ್ಚಾತ್ಯರ ಸಹಿಷ್ಣುತೆ ಎಷ್ಟರ ಮಟ್ಟಿಗಿದೆಯೆಂದರೆ ಪೂರ್ವದ ಓರ್ವ ಮಹಿಳೆ ತನ್ನ ಶಿರವಸ್ತ್ರವನ್ನು ಕಿತ್ತೆಸೆಯಲು ಸಿದ್ಧಳಾಗದಿದ್ದರೆ ಇವರು ನರಿಗಳ ದೃಷ್ಟಿಯಿಂದ ಆಕೆಯನ್ನು ನೋಡುತ್ತಾ ಆಕೆಯ ಉಡುಪನ್ನು ಚಿಂದಿಚಿಂದಿ ಮಾಡಲು ಮುಂದಾಗುತ್ತಾರೆ.

ಇಸ್ಲಾಮೀ ಮೌಲ್ಯಗಳು ಮತ್ತು ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಪರಸ್ಪರ ವಿರುದ್ಧವೆಂದು ಸಾರುವವರು ಮನುಷ್ಯನ ಮೃಗೀಯ ಹಕ್ಕುಗಳಿಗಾಗಿ ಎಲ್ಲ ರೀತಿಯ ಸ್ವಾತಂತ್ರ್ಯವನ್ನು

ಬಯಸುತ್ತಾರೆ. ಆಧುನಿಕ ಇಸ್ಲಾಮೀ ಚಿಂತಕರು ಇಸ್ಲಾಮಿನ ಆಡಳಿತ ವ್ಯವಸ್ಥೆಯನ್ನು ಸರ್ವಾಧಿಕಾರ ಮತ್ತು ರಾಜಾಧಿಕಾರದ ಎಲ್ಲ ಕೆಡುಕುಗಳಿಂದ ಮುಕ್ತಗೊಳಿಸಿ ಶುದ್ಧ ಪ್ರಜಾಸತ್ತಾತ್ಮಕ ವ್ಯವಸ್ಥೆಯ ಉತ್ಥಾನಕ್ಕಾಗಿ ಚಿಂತಿತರಾಗಿದ್ದಾರೆ. ದುರದೃಷ್ಟವಶಾತ್ ಪಶ್ಚಿಮದ ಪೋಷಕತ್ವದಲ್ಲಿ ಯಾವ ಸರ್ವಾಧಿಕಾರಿಗಳು ಮುಸ್ಲಿಮ್ ರಾಷ್ಟ್ರಗಳ ಮೇಲೆ ಹೇರಲ್ಪಟ್ಟಿರುವರೋ ಅವರು ಒಂದೋ ತಮ್ಮ ಯೋಚನಾಶೈಲಿಯನ್ನೂ ತಮ್ಮ ಕಾರ್ಯ ವಿಧಾನವನ್ನೂ ಬದಲಾಯಿಸಬೇಕು. ಇಲ್ಲವೇ ಫ್ರೆಂಚ್ ಕ್ರಾಂತಿಯಂತೆ ಅಥವಾ ಇರಾನ್ ಕ್ರಾಂತಿಯಂತೆ ಅವರಿಗೂ ಇಸ್ಲಾಮೀ ಪ್ರಜಾಸತ್ತೆ(ಶೂರಾ)ಗೆ ಸ್ಥಳ ಬಿಟ್ಟು ಕೊಡಬೇಕಾದೀತು.

17ನೆಯ ಶತಮಾನದ ನಂತರ ಪಶ್ಚಿಮವು ಧರ್ಮ ಮತ್ತು ರಾಜಕೀಯದ ಗಡಿಗಳನ್ನು ಬೇರ್ಪಡಿಸಿತು. ಪರಸ್ಪರರ ವ್ಯವಹಾರಗಳಲ್ಲಿ ಅವುಗಳ ಹಸ್ತಕ್ಷೇಪವನ್ನು ನಿಷೇಧಿಸಿತು. ಧರ್ಮದ ಬಗ್ಗೆ ಅದರ ದೃಢನಂಬಿಕೆಯೇನೆಂದರೆ ಅದು ಕೆಲವು ಆರಾಧನೆ ಮತ್ತು ವೈಯಕ್ತಿಕ ಜೀವನದ ನೈತಿಕತೆ ಮತ್ತು ಸಂಪ್ರದಾಯಗಳಿಗೆ ಸೀಮಿತವಾದ ಒಂದು ಸಂಹಿತೆಯಾಗಿದೆ. ಉಳಿದ ಜೀವನದ ಪ್ರಮುಖ ವಿಷಯಗಳ ಬಗ್ಗೆ ಅದಕ್ಕೆ ಯಾವುದೇ ಸಂಬಂಧವಿಲ್ಲ. ಜಾನ್ ಎಸ್ಪಾಸಿಟೋ ಅವರ ಪದಗಳಲ್ಲಿ:

"ಧರ್ಮದ ಆಧುನಿಕ ಕಲ್ಪನೆ ಏನೆಂದರೆ ಇದು ಮನುಷ್ಯನ ವೈಯಕ್ತಿಕ ಜೀವನದೊಂದಿಗೆ ಮಾತ್ರ ಸಂಬಂಧವಿರುವ ವಿಶ್ವಾಸಗಳ ಒಂದು ಸಂಹಿತೆಯಾಗಿದೆ. ಚರ್ಚ್ ಮತ್ತು ಆಡಳಿತದ ವಿಂಗಡನೆಯು ಬಹಳ ಜನಪ್ರಿಯವಾಗಿದೆ. ಅದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಒಂದು ಸುಪರೀಕ್ಷಿತ ಕಲ್ಪನೆಯಾಗಿದೆ. ಆದ್ದರಿಂದ ಹಿಂದಿನ ಕಾಲದ ಚಿಂತನೆ ಮತ್ತು ಆಚಾರಗಳನ್ನು ಜನರು ಮರೆತಿದ್ದಾರೆ. ಹೆಚ್ಚಿನ ಜನರ ಮಟ್ಟಿಗೆ ಇದು ಒಂದು ಜಾಗತಿಕ, ಅನಂತ ಮತ್ತು ಸರ್ವಸಮ್ಮತ ಸತ್ಯವಾಗಿದೆ. ಆದ್ದರಿಂದಲೇ ಆಧುನಿಕ ಧರ್ಮ ನಿರಪೇಕ್ಷತೆಯ ಹಿನ್ನೆಲೆಯಲ್ಲಿ ಧರ್ಮವನ್ನು ರಾಜಕೀಯದೊಂದಿಗೆ ಜೋಡಿಸುವುದು ಅಪಾಯಕಾರಿ ಮತ್ತು ತೀವ್ರವಾದಿ ಕ್ರಮವಾಗಿದೆ. ಸೆಕ್ಯೂಲರ್ ಚಿಂತನೆಯ ಜನರು, ಅವರು ಸರಕಾರಿ ಅಧಿಕಾರಿಗಳಾಗಲಿ, ರಾಜಕೀಯ ವಿಮರ್ಶಕರಾಗಲಿ ಅಥವಾ ಸಾರ್ವಜನಿಕರಾಗಲಿ ಇಸ್ಲಾಮನ್ನು ಒಂದು ಸಂಪೂರ್ಣ ಮತ್ತು ಸಮಗ್ರ ಜೀವನ ವ್ಯವಸ್ಥೆಯೆಂದು ನಂಬುವ ಮುಸ್ಲಿಮರನ್ನು ಅಥವಾ ಅವರ ಸಂಘಟನೆಗಳನ್ನು ಕಂಡಾಗ ಅವರಿಗೆ ಮೂಲಭೂತವಾದದ ಪಟ್ಟ ಕಟ್ಟುತ್ತಾರೆ. ಅವರನ್ನು ಬೌದ್ಧಿಕ ಮತ್ತು ವೈಚಾರಿಕವಾಗಿ ಹಿಂದುಳಿದವರು, ಪರಿವರ್ತನೆಯ ವಿರೋಧಿಗಳು ಮತ್ತು ಜಗತ್ತಿಗೆ ಅಪಾಯಕಾರಿಗಳಾದ ಮತಿಭ್ರಾಂತರೆಂದು ಪರಿಗಣಿಸುತ್ತಾರೆ. ಮುಸ್ಲಿಮ್ ರಾಷ್ಟ್ರಗಳ ಅನೇಕ ಸರಕಾರ ಮತ್ತು ಪ್ರಮುಖ ವ್ಯಕ್ತಿಗಳ ವಿಚಾರಶೈಲಿಯೂ ಇದುವೇ ಆಗಿದೆ. ಧರ್ಮ ಮತ್ತು ರಾಜಕೀಯವನ್ನು ಪರಸ್ಪರ ಬೆರೆಸುವುದರಿಂದ ಉಂಟಾಗುವ ಪರಿಣಾಮಗಳ ಪುರಾವೆಯ ರೂಪದಲ್ಲಿ ಕೆಲವು ಮಂದಿ ಭಾವುಕ ಯುವಕರ ಮತ್ತು ಅವರ ಗುಂಪುಗಳ ಕೆಲವು ಹಿಂಸಾತ್ಮಕ ಕಾರ್ಯಾಚರಣೆಗಳನ್ನು ಮುಂದಿಡಲಾಗುತ್ತದೆ. (Islamic Threat- P. 199)

ಇಸ್ಲಾಮನ್ನು ಸರಿಯಾಗಿ ಅರ್ಥ ಮಾಡುವಲ್ಲಿ, ಧರ್ಮಕ್ಕೂ ಮನುಷ್ಯನ ಸಾರ್ವಜನಿಕ ಜೀವನಕ್ಕೂ ಯಾವುದೇ ಸಂಬಂಧವಿಲ್ಲ ಎಂಬ ಪಶ್ಚಿಮದ ವಿಚಾರ ಶೈಲಿಯೇ ತೊಡಕಾಗಿದೆ. ಈ ವಿಚಾರ ಶೈಲಿಯು ಅವರ ಎಲ್ಲ ಸಂಸ್ಥೆ ಮತ್ತು ವ್ಯವಹಾರಗಳ ನರನಾಡಿಗಳಲ್ಲಿ ಅಚ್ಚಾಗಿದೆ. ಅದರಿಂದ ಒಂದಿಂಚು ಸರಿದು ಅವರು ಯಾವುದೇ ವಿಷಯವನ್ನು ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ. ಕಳೆದ ಹಲವು ಶತಮಾನಗಳಿಂದ ಪಾಶ್ಚಾತ್ಯ ಕ್ರೈಸ್ತರು ಧರ್ಮವನ್ನು ಯಾವ ರೀತಿ ಕಾಲಡಿಗೆ ಹಾಕಿ ತುಳಿದಿರುವರೆಂದರೆ ಈಗ ಅವರು ಅದಕ್ಕೆ ಯಾವುದೇ ಗೌರವಾರ್ಹ ಸ್ಥಾನಮಾನ ಕೊಡುವುದನ್ನು ಕಲ್ಪಿಸುವುದೂ ಅಸಾಧ್ಯ. ಹಿಂದಿನ ಕಾಲದಲ್ಲಿ ಯಾರಾದರೂ ಅದರ ಪುನರುತ್ಥಾನದ ಬಗ್ಗೆ ಯೋಚಿಸಿದರೆ ಅವನನ್ನು ಮೂಲಭೂತವಾದಿ ಎಂದು ಮೂದಲಿಸಲಾಗುತ್ತಿತ್ತು. ಈಗ ಅದೇ ಬಿರುದನ್ನು ಪಶ್ಚಿಮವು ಇಸ್ಲಾಮ್‌ಗೆ ಕೊಟ್ಟಿದೆ. ಪಾಶ್ಚಾತ್ಯನ ಬಳಿ ನಿತ್ಯ ಬದಲಾಗುತ್ತಿರುವ ಜೀವನ ಮತ್ತು ನಿತ್ಯ ಜೀವನದ ಪ್ರತಿಯೊಂದು ವ್ಯವಹಾರದಲ್ಲಿ ಧರ್ಮ ಮತ್ತು ನೀತಿಯೊಂದಿಗೆ ಸಂಬಂಧ ಕಡಿಯುವ ಪ್ರವೃತ್ತಿ ಪ್ರಗತಿಪರ ಯುಗದ ಪ್ರತೀಕವಾಗಿದೆ. ಈ ಚಕ್ರವನ್ನು ಯಾವ ಶಕ್ತಿಯೂ ಹಿಂದಕ್ಕೆ ತಿರುಗಿಸಲಾರದು.

ಈ ವಾಸ್ತವಿಕತೆಗಳ ಹೊರತಾಗಿಯೂ ಎಲ್ಲ ಇಸ್ಲಾಮೀ ಆಂದೋಲನಗಳು ಮತ್ತು ಮುಸ್ಲಿಮ್ ಸಂಘಟನೆಗಳನ್ನು ಮೂಲಭೂತವಾದಿ ಮತ್ತು ಸಂಕುಚಿತವಾದಿ ಎಂದು ಸಾರುವ ಮೂಲಕ ತಾವು ತಪ್ಪು ಮಾಡುತ್ತಿದ್ದೇವೆಂಬ ಪ್ರಜ್ಞೆ ಪಶ್ಚಿಮದ ಲೇಖಕರು ಮತ್ತು ಚಿಂತಕರಲ್ಲಿ ಜಾಗೃತವಾಗುತ್ತಿದೆ. 20ನೆಯ ಶತಮಾನದ ಅನೇಕ ಮುಸ್ಲಿಮ್ ಚಿಂತಕರು ಮತ್ತು ಸುಧಾರಕರ ಪ್ರಯತ್ನಗಳಿಂದ ಸಂಶೋಧನೆ ಮತ್ತು ಸಮಾಲೋಚನೆಯ ಮಹತ್ವದ ಪ್ರಜ್ಞೆ ಮೂಡುತ್ತಿದೆ. ಬದಲಾಗುತ್ತಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಚಿಂತನೆ, ಅರ್ಥ ವಿವರಣೆ, ಅನ್ವಯಿಸುವಿಕೆ ಮತ್ತು ಸ್ಪಷ್ಟೀಕರಣಗಳ ವ್ಯಾಪ್ತಿ ವಿಸ್ತರಿಸುತ್ತಿದೆ. ಪಶ್ಚಿಮದ ಸಂಸ್ಕೃತಿ ಮತ್ತು ಅದರ ಪ್ರಜಾಸತ್ತೆಯ ಕಲ್ಪನೆಗಳು, ಮಾನವ ಹಕ್ಕುಗಳ ಬಗ್ಗೆ ಅದರ ಹೋರಾಟದ ಆರೋಗ್ಯಪೂರ್ಣ ಅಂಶಗಳನ್ನು ಇಸ್ಲಾಮಿಗೆ ಸರಿಹೊಂದುವ ವೆಂದು ಪರಿಗಣಿಸಿ ಅದರೊಂದಿಗೆ ಸಹಕರಿಸುವ ಮತ್ತು ಅದನ್ನು ಸುಧಾರಿಸುವ ಒಲವು ಅನೇಕ ಇಸ್ಲಾಮೀ ರಾಷ್ಟ್ರ ಮತ್ತು ಆಂದೋಲನಗಳಲ್ಲಿ ಪ್ರಗತಿಯಲ್ಲಿದೆ. ಇಂತಹ ಪರಿಸ್ಥಿತಿಯಲ್ಲಿ ಝಿಯೋನಿಸ್ಟ್ ಮಾಧ್ಯಮ ಮತ್ತು ಪಾಶ್ಚಾತ್ಯ ಫ್ಯಾಸಿಸ್ಟ್ ವರ್ಗಗಳು, ಮುಸ್ಲಿಮರು ಮತ್ತು ಇಸ್ಲಾಮನ್ನು ಕಳಂಕಿತವಾಗಿ ಪ್ರಸ್ತುತಪಡಿಸುವುದನ್ನು ಮತ್ತು ಅದನ್ನು ಹಿಂಸೆ ಮತ್ತು ಭಯೋತ್ಪಾದನೆಯ ಮೂಟೆಯೆಂದು ಸಾಬೀತುಪಡಿಸುವ ಪ್ರಯತ್ನಗಳನ್ನು ಸ್ವತಃ ಪಶ್ಚಿಮದಲ್ಲಿ ಕೀಳಾಗಿ ಕಾಣಲಾಗುತ್ತದೆ.

ಇಸ್ಲಾಮೀ ಜಗತ್ತಿನಲ್ಲಿ ರಾಜಕೀಯ ಸೇಡು ತೀರಿಸಲಿಕ್ಕಾಗಿ ಕ್ರಾಂತಿಯ ಮಾತಾಡುವ ಗುಂಪು ಯಾವಾಗಲೂ ಇತ್ತು ಎಂಬುದು ನಿಜ. ಕೆಲವರು ಶಕ್ತಿಯ ಬಲದಿಂದ ಇಸ್ಲಾಮೀ ಜೀವನ ವ್ಯವಸ್ಥೆಯನ್ನು ಸ್ಥಾಪಿಸುವ ಮಾತಾಡುತ್ತಾರೆ. ಮಾರ್ಕ್ಸಿಸ್ಟ್ ಮತ್ತು ಮಾವೋಯಿಸ್ಟ್‌ಗಳು ಬಂದೂಕಿನ ನಳಿಗೆಯಿಂದ ಕ್ರಾಂತಿ ತರುವ ಮಾತಾಡುವಂತೆ. ಆದರೆ ಸಾರ್ವಜನಿಕರ

ಬೆಂಬಲವಾಗಲಿ ಇಸ್ಲಾಮಿ ಪುನರುತ್ಥಾನದ ಧ್ಯೇಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಹೋಣೆಗಾರ ಸಂಘಟನೆ ಮತ್ತು ಆಂದೋಲನಗಳ ಬೆಂಬಲವಾಗಲಿ ಅವರಿಗಿಲ್ಲ. ಅದೊಂದು ಅತ್ಯಂತ ಕನಿಷ್ಠ ಸಂಖ್ಯೆಯ ಜನರ ಗುಂಪಾಗಿದೆ. ಅದಕ್ಕೆ ಸಮುದಾಯದ ಸಾರ್ವಜನಿಕರಲ್ಲಿ ಯಾವುದೇ ಬೆಲೆಯಿಲ್ಲ. ಇವರು ಒಂದು ವೇಳೆ ಹಿಂಸೆ ಮತ್ತು ಭಯೋತ್ಪಾದನೆಯ ಮಾರ್ಗವನ್ನು ಅವಲಂಬಿಸುವುದಾದರೆ ತಮ್ಮ ಸಮಕಾಲೀನ ಪಾಶ್ಚಾತ್ಯ ಮತ್ತು ಕಮ್ಯೂನಿಸ್ಟ್ ಭಯೋತ್ಪಾದಕ ಸಂಘಟನೆಗಳ ಹೆಜ್ಜೆಗಳಲ್ಲಿ ನಡೆದು ಅವರದೇ ಮಾದರಿಯನ್ನು ಮುಂದಿಡುತ್ತಿದ್ದಾರೆ. ಅಮೇರಿಕ ಮತ್ತು ಅದರ ಕೆಲವು ಮಿತ್ರರಾಷ್ಟ್ರಗಳು ತಮ್ಮ ಕೆಲವು ಕೃತ್ಯಗಳಿಂದ ಇಂತಹ ಚಟುವಟಿಕೆಗಳಿಗೆ ಬೆಂಬಲ ನೀಡುತ್ತಿವೆ. ಏಕೆಂದರೆ ಭೂಮಿಯಲ್ಲಿ ಕ್ಷೋಭೆ ಹರಡುವುದು, ಒಂದು ಜನಾಂಗ ಮತ್ತು ಒಂದು ಸಂಸ್ಕೃತಿಯನ್ನು ಇನ್ನೊಂದು ಜನಾಂಗ ಅಥವಾ ಸಂಸ್ಕೃತಿಯೊಂದಿಗೆ ಸಂಘರ್ಷಿಸುವಂತೆ ಮಾಡುವುದು ಅವರ ಅಚ್ಚು ಮೆಚ್ಚಿನ ಕೆಲಸವಾಗಿದೆ. ಅಮೇರಿಕದ ವಿದೇಶಾಂಗ ಸಚಿವಾಲಯ ಮತ್ತು ಧೋರಣೆ ರಚಿಸುವ ಸಂಸ್ಥೆಗಳ ಧ್ಯೇಯ ಅದುವೇ ಎಂದು ಭಾಸವಾಗುತ್ತದೆ. ಇಸ್ಲಾಮಿ ರಾಷ್ಟ್ರಗಳಲ್ಲಿ ಪ್ರಾಮಾಣಿಕವಾಗಿ ಇಸ್ಲಾಮ್‌ನ ಯಾವುದೇ ತತ್ವ ಅಥವಾ ಸಾಂಸ್ಕೃತಿಕ ಮೌಲ್ಯವನ್ನು ಬಲಪಡಿಸಲಿಕ್ಕಾಗಿ ಹೆಜ್ಜೆ ಇರಿಸಿದರೆ ಮೊಟ್ಟಮೊದಲು ಅಮೇರಿಕ ಅದಕ್ಕೆದುರಾಗಿ ಎದೆ ಸೆಟೆದು ನಿಲ್ಲುತ್ತದೆ. ಅದು ಪಾಶ್ಚಾತ್ಯರ ಕೊಳೆತ ಮತ್ತು ಅವನತಿ ಶೀಲ ಸಂಸ್ಕೃತಿಯ ರಕ್ಷಣೆಗಾಗಿ ಜಾಗತಿಕ ಪೋಲೀಸನ ಪಾತ್ರ ನಿರ್ವಹಿಸುತ್ತಿರುವಂತೆ ಕಾಣುತ್ತದೆ.

ಆದ್ದರಿಂದ ಇಸ್ಲಾಮಿ ಭಯೋತ್ಪಾದನೆ ಒಂದು ವಂಚನಾತ್ಮಕ ಕಲ್ಪನೆಯಾಗಿದೆ. ಈ ಬಗ್ಗೆ ಜಾಗತಿಕ ಮಟ್ಟದಲ್ಲಿ ಪ್ರಶ್ನೆ ಮೂಡುತ್ತಿದೆ. ಪಶ್ಚಿಮದ ರಾಜಕಾರಣಿಗಳು ಮತ್ತು ಝಿಯೋನಿಸ್ಟ್ ಶಕ್ತಿಗಳ ತೆರೆಮರೆಯ ಪ್ರಯತ್ನಗಳ ಪ್ರಭಾವ ಈಗ ಅಳಿಯುತ್ತಿದೆ.

## ಸಮಾನಾರ್ಥದ ಪದಗಳು

ವಿಭಿನ್ನ ಮಾಧ್ಯಮಗಳ ಮೂಲಕ ಇಸ್ಲಾಮಿ ಭಯೋತ್ಪಾದನೆಯ ಭೂತವನ್ನು ಜನಮನಗಳಲ್ಲಿ ತುಂಬಲು ಪ್ರಯತ್ನ ನಡೆಯುತ್ತಿದೆ. ಆ ಪೈಕಿ ಒಂದು ಮಾಧ್ಯಮ ಆ ಪದದ ಸಮಾನಾರ್ಥ ಪದಗಳನ್ನು ಉಪಯೋಗಿಸುವುದಾಗಿದೆ. ಈ ಸಮಾನಾರ್ಥದ ಪದಗಳು ನಿಘಂಟಿನ ಅರ್ಥದಲ್ಲಿ ಸಮಾನಾರ್ಥವನ್ನು ಹೊಂದಿಲ್ಲ. ಅವೆಲ್ಲವೂ ಪಶ್ಚಿಮದ ಮಾಧ್ಯಮ ವ್ಯಕ್ತಿಗಳ ಸೃಷ್ಟಿಯಾಗಿವೆ. ಅವರು ಅದನ್ನು ಸ್ವಯಂಕೃತ ಇಸ್ಲಾಮಿ ಭಯೋತ್ಪಾದನೆಗೆ ಸಮಾನಾರ್ಥದಲ್ಲಿ ಬಳಸುತ್ತಾರೆ. ಈ ಪೈಕಿ ಪ್ರಥಮ ಪದ Fundamentalism ಅಥವಾ ಮೂಲಭೂತವಾಗಿದೆ.

## Fundamentalist ಅಥವಾ ಮೂಲಭೂತವಾದಿ

ಮೂಲಭೂತವಾದವು ಐತಿಹಾಸಿಕ ನೆಲೆಯಲ್ಲಿ ಪಶ್ಚಿಮದ ಕೊಡುಗೆಯಾಗಿದೆ. ಪಶ್ಚಿಮದಲ್ಲಿ ಕ್ರೈಸ್ತ ಮೂಲಭೂತವಾದಿಗಳು ಮತ್ತು ಸ್ವತಂತ್ರ ವಿಚಾರದವರ ಮಧ್ಯೆ ಸಂಘರ್ಷ ಏರ್ಪಟ್ಟಿತ್ತು. ಇಸ್ಲಾಮಿನಲ್ಲಿ ಇಂತಹ ಯಾವುದೇ ಸಂಘರ್ಷವಿಲ್ಲ. ಆದ್ದರಿಂದ

ಇಸ್ಲಾಮಿನಲ್ಲಿ ಮೂಲಭೂತವಾದ ಮತ್ತು ಆಧುನಿಕತೆಯಂತಹ ಕಲ್ಪನೆಯೇ ಕಾಣಸಿಗುವುದಿಲ್ಲ. ಆದರೆ ಪಾಶ್ಚಾತ್ಯರು ಮುಸ್ಲಿಮರ ಮೇಲೆ ಮೂಲಭೂತವಾದದ ಬಿಲ್ಲೆಯನ್ನು ಅಂಟಿಸಿದರು. ಈ ಶಬ್ದದ ಅರ್ಥ ತತ್ವಗಳಂತೆ ನಡೆಯುವುದು ಎಂದಾಗಿದೆ. ಆದರೆ 19ನೆಯ ಶತಮಾನದ ಕೊನೆಯಲ್ಲಿ ಈ ಪದವನ್ನು ಬೈಬಲ್‌ನ ಪ್ರತಿಯೊಂದು ಪದವನ್ನು ಅದರ ಬಾಹ್ಯ ಅರ್ಥದಲ್ಲಿ ತೆಗೆದುಕೊಂಡು, ಅದಕ್ಕೆ ವಿರುದ್ಧವಾಗಿ ವಿಜ್ಞಾನದ ಆವಿಷ್ಕಾರಗಳ ಮೂಲಕ ಸಾಬೀತಾದ ವಾಸ್ತವಿಕತೆಗಳನ್ನು ನಿರಾಕರಿಸುವ ಧರ್ಮಾಂಧರಿಗೆ ಬಳಸಲಾಗುತ್ತಿತ್ತು.

(Prof. Gordon Conway Islamophobia A Challenge for us all, The Runuy made Trust 1997, P-7)

ಆದರೆ ಮುಸ್ಲಿಮರು ಇಂತಹ ಧರ್ಮಾಂಧತೆಯನ್ನು ಎಂದೂ ಪ್ರದರ್ಶಿಸಲಿಲ್ಲ. ಮುಸ್ಲಿಮರು ಕುರ್‌ಆನನ್ನು ಅಲ್ಲಾಹನಿಂದ ಅವತೀರ್ಣವಾದುದೆಂದು ನಂಬುತ್ತಾರೆ ನಿಜ. ಆದರೆ ಅವರು ಅದರ ಪ್ರತಿಯೊಂದು ಪದವನ್ನು ಬಾಹ್ಯಾರ್ಥದಲ್ಲಿ ತೆಗೆದುಕೊಳ್ಳುವುದಿಲ್ಲ. ಬದಲಾಗಿ ಅವರು ಕುರ್‌ಆನಿನ ಪದಗಳನ್ನು ಅರ್ಥ ಮಾಡಲು ಪ್ರಯತ್ನಿಸುತ್ತಾರೆ. ಕುರ್‌ಆನಿನ ಪದಗಳು, ಮಾನವ ಬುದ್ಧಿ, ವೈಜ್ಞಾನಿಕ ಹಾಗೂ ಅನುಭವ ಸಿದ್ಧ ವಿದ್ಯೆಗಳಿಂದ ಪ್ರಯೋಜನ ಪಡೆದು ಅದನ್ನು ವ್ಯಾಖ್ಯಾನಿಸುತ್ತಾರೆ. ಆದರೂ ಈ ಪದವನ್ನು ಮೂಲ ಅರ್ಥದಿಂದ ಸರಿಸಿ ಇಸ್ಲಾಮ್ ಪ್ರಿಯರ ಮೇಲೆ ಹೇರಲಾಯಿತು. ಮುಸ್ಲಿಮರು 14 ಶತಮಾನಗಳಷ್ಟು ಹಳೆಯ ಪದಗಳಿಗೆ ಅಂಟಿಕೊಂಡಿರುವರೆಂದೂ ಅವರು ಆಧುನಿಕ ವಿದ್ಯೆ, ಆಧುನಿಕ ಕಲ್ಪನೆಗಳು, ಸ್ವಾತಂತ್ರ್ಯ, ಸ್ತ್ರೀ-ಪುರುಷ ಸಮಾನತೆ, ಪ್ರಜಾಸತ್ತೆ ಇತ್ಯಾದಿಗಳ ವೈರಿಗಳಾಗಿದ್ದಾರೆಂದೂ ಇದರ ಮೂಲಕ ಜನರನ್ನು ನಂಬಿಸಲಾಗುತ್ತಿದೆ.

## Totalitarian ಅಥವಾ ಸರ್ವಾಧಿಕಾರಿ

ಸರ್ವಾಧಿಕಾರಿ ಎಂದರೆ ಅಪ್ರಜಾಸತ್ತಾತ್ಮಕ ಮತ್ತು ಅಮಾನವೀಯ ಮೌಲ್ಯಗಳನ್ನು ನಂಬುವವ ಅಥವಾ ಒಂದೇ ವ್ಯಕ್ತಿತ್ವದಲ್ಲಿ ಎಲ್ಲ ಅಧಿಕಾರಗಳನ್ನು ಕೇಂದ್ರೀಕರಿಸುವವನು. ಈ ಪದವನ್ನು ಭಯೋತ್ಪಾದನೆಗೆ ಸಮಾನಾರ್ಥವಾಗಿ ಮತ್ತು ಮುಸ್ಲಿಮರ ಅವಹೇಳನಕ್ಕಾಗಿ ಬಳಸಲಾಗುತ್ತದೆ. ವಸ್ತುತಃ ಅದಕ್ಕೆ ವಾಸ್ತವಿಕತೆಗಳೊಂದಿಗೆ ಯಾವ ಸಂಬಂಧವೂ ಇಲ್ಲ. ಈ ಪದದ ಎಲ್ಲ ಕೆಟ್ಟ ಅರ್ಥಗಳನ್ನು ಮಾಧ್ಯಮಗಳು ಮುಸ್ಲಿಮರಿಗೆ ಅಂಟಿಸುತ್ತವೆ.

## Medievalism ಅಥವಾ ಪ್ರತಿಗಾಮಿತನ

Medievalismನ ಶಬ್ದಾರ್ಥವನ್ನು ನಿರ್ಧರಿಸುವುದು ಕಷ್ಟ. ಅದರ ಅನ್ವಯಿಕ ಅರ್ಥದ ದೃಷ್ಟಿಯಿಂದ ಅದನ್ನು ಪ್ರತಿಗಾಮಿತನ ಎನ್ನಬಹುದು. ಪಶ್ಚಿಮದಲ್ಲಿ ಮಧ್ಯ ಯುಗವನ್ನು ಮಾನವ ಹಕ್ಕುಗಳ ದಮನ, ಮಹಿಳೆಯರ ಅವಹೇಳನ ಮತ್ತು ಅನ್ಯಾಯ-ಅತ್ಯಾಚಾರಗಳ ಯುಗವೆನ್ನಲಾಗುತ್ತದೆ. ನಿಸ್ಸಂದೇಹವಾಗಿಯೂ ಪಶ್ಚಿಮದ ದೃಶ್ಯಾವಳಿ ಹೀಗೆಯೇ ಇದೆ. ಆದರೆ ಪೂರ್ವದಲ್ಲಿ ಇದೇ ಯುಗವು ಇಸ್ಲಾಮಿನ ಔನ್ನತ್ಯದ ಯುಗವಾಗಿದೆ. ಈ ಪದದ ಮೂಲಕ ಮುಸ್ಲಿಮರನ್ನು ಹಂಗಿಸಲಾಗುತ್ತದೆ. ಅವರು

ಪ್ರತಿಗಾಮಿಗಳು, ಮಧ್ಯಯುಗದ ಜೀವನ ವ್ಯವಸ್ಥೆಯನ್ನು ಸ್ಥಾಪಿಸ ಬಯಸುತ್ತಾರೆ. ಅವರು ಪ್ರಗತಿ ಮಾಡಿ ಮುಂದೆ ಹೋಗುವ ಬದಲು ಪ್ರತಿಗಾಮಿತನದಿಂದ ಕತ್ತಲ ಯುಗಕ್ಕೆ ಮರಳ ಬಯಸುತ್ತಾರೆ. ಅವರು ಸ್ವಾತಂತ್ರ್ಯದ ವೈರಿಗಳು ಮತ್ತು ಲಿಂಗ ತಾರತಮ್ಯದ ಬೆಂಬಲಿಗರಾಗಿದ್ದಾರೆ ಎಂದು ವ್ಯಂಗ್ಯ ಮಾಡಲಾಗುತ್ತದೆ.

ಭಯೋತ್ಪಾದನೆಯ ಸಮಾನಾಂತರ ಪದಗಳ ಹೊರತು ಇನ್ನೂ ಕೆಲವು ಪದಗಳನ್ನು ಬಳಸಲಾಗುತ್ತದೆ. ಕೆಲವು ಇಸ್ಲಾಮಿ ಪಾರಿಭಾಷಿಕಗಳನ್ನು ವಿಕೃತಗೊಳಿಸಿ ಅವುಗಳನ್ನು ಇದೇ ಅರ್ಥದಲ್ಲಿ ಬಳಸಲಾಗುತ್ತದೆ. ಉದಾ: ಜಿಹಾದ್, ಖಲೀಫಾ, ಇಸ್ಲಾಮಿಸಮ್, ಪೊಲಿಟಿಕಲ್ ಇಸ್ಲಾಮ್, ಇಸ್ಲಾಮಿ ಚಳವಳಿಗಳು ಇತ್ಯಾದಿ. 'ಇಸ್ಲಾಮಿಸಮ್ ಅಥವಾ ಪೊಲಿಟಿಕಲ್ ಇಸ್ಲಾಮ್' ಎಂದರೆ ಅವರ ಬಳಿ ಸಾಂಪ್ರದಾಯಿಕ ಇಸ್ಲಾಮಿನ ಹೊರತು ಆಧುನಿಕ ಶೈಲಿಯಲ್ಲಿ ಇಸ್ಲಾಮಿನ ಹೆಸರಲ್ಲಿ ಹೂಡಿದ ಆಂದೋಲನ. ಅವರ ದೃಷ್ಟಿಯಲ್ಲಿ ಅದರ ಉದ್ದೇಶ ಕೇವಲ ಅಧಿಕಾರ ಗಳಿಸುವುದಾಗಿದೆ.

ಕೆನಡಾದ ಮಿಡ್ಲ್ ಈಸ್ಟ್ ಫೋರಮ್‌ನ ನಿರ್ದೇಶಕರಾದ ಡೇನಿಯಲ್ ಪ್ಯಾಪ್ಸ್ (Denial Pipes) 'ಇಸ್ಲಾಮಿಸಮ್'ನ ಬಗ್ಗೆ ಚರ್ಚಿಸುತ್ತಾ ಹೀಗೆ ಬರೆದಿರುವರು:

ಇಸ್ಲಾಮ್ ಪ್ರಿಯರು ಪಾಶ್ಚಾತ್ಯ ಮೌಲ್ಯ, ಪರಂಪರೆ, ತತ್ವಶಾಸ್ತ್ರ ಮತ್ತು ರಾಜಕೀಯ ಸಂಸ್ಥೆಗಳನ್ನು ಪೂರ್ಣವಾಗಿ ತಿರಸ್ಕರಿಸುತ್ತಾರೆ. ಆದರೆ ಅವರು ಪಶ್ಚಿಮ ದಿಂದ ಉನ್ನತ ತಂತ್ರಜ್ಞಾನವನ್ನು ಮಾತ್ರ ಗಳಿಸ ಬಯಸುತ್ತಾರೆ. ಮಾತ್ರವಲ್ಲದೆ ಮುಸ್ಲಿಮೇತರರೊಂದಿಗೆ ವಿಶೇಷವಾಗಿ, ಯಹೂದಿ ಮತ್ತು ಕ್ರೈಸ್ತರೊಂದಿಗೆ ಅವರಿಗೆ ಆಳವಾದ ದ್ವೇಷವಿದೆ. ಇಸ್ಲಾಮ್ ಪ್ರಿಯರ ತತ್ವ-ಸಿದ್ಧಾಂತಗಳು ಮತ್ತು ಅವರ ಕೆಲಸ ಕಾರ್ಯಗಳಿಂದ ಅದು ಆಗಾಗ ಪ್ರಕಟವಾಗುತ್ತಿರುತ್ತದೆ. ಒಟ್ಟಿನಲ್ಲಿ ಇಸ್ಲಾಮ್ ಪ್ರಿಯರು ಇಸ್ಲಾಮನ್ನು ಒಂದು ವ್ಯಾವಹಾರಿಕ ಸಿದ್ಧಾಂತವಾಗಿ ಮಾರ್ಪಡಿಸಿರುವರು. 'ಇಸ್ಲಾಮಿಸಮ್'ನ ಪಾರಿಭಾಷಿಕವು ಒಂದು ಉಪಯುಕ್ತ ಪಾರಿಭಾಷಿಕವಾಗಿದೆ. ಏಕೆಂದರೆ 20ನೆಯ ಶತಮಾನದ ಇತರ ಜೀವನ ವ್ಯವಸ್ಥೆಗಳಂತಹ ಒಂದು ವ್ಯವಸ್ಥೆ ಅಥವಾ 'ಇಸಮ್'ಅನ್ನು ಅದು ಪ್ರಕಟಗೊಳಿಸುತ್ತದೆ. ಮಾರ್ಕ್ಸಿಸಮ್ ಮತ್ತು ಫ್ಯಾಸಿಸಮ್‌ನ ನಂತರ 'ಇಸ್ಲಾಮಿಸಮ್'ನ ಪ್ರಸ್ತಾಪ ಬರುತ್ತದೆ. ಅದು ನಮ್ಮ ಯುಗದ ಇತರ ಕಲ್ಪನೆಗಳಂತೆ ಇಸ್ಲಾಮಿ ವಿಚಾರಧಾರೆಯನ್ನು ಆಧರಿಸಿದ ಕಲ್ಪನೆಯನ್ನು ಪ್ರತಿನಿಧಿಸುತ್ತದೆ. ಈ ಕಲ್ಪನೆ ಪಾಶ್ಚಾತ್ಯ ರಾಜಕೀಯ ಮತ್ತು ಆರ್ಥಿಕ ಕಲ್ಪನೆಗಳಂತೆ ಇಸ್ಲಾಮಿನಲ್ಲಿ ಒಂದು ಹೊಸ ಆತ್ಮವನ್ನು ಊದುತ್ತದೆ. ಇಸ್ಲಾಮ್ ಪ್ರಿಯರು ಅಧಿಕಾರಕ್ಕೆ ಬಂದರೆ ಶಸ್ತ್ರಾಸ್ತ್ರಗಳ ವ್ಯಾಪಕತೆ, ಭಯೋತ್ಪಾದನೆ ಮತ್ತು ಅಕ್ರಮ-ಅನ್ಯಾಯಗಳ ಬೇರೆ ರೂಪಗಳು ಸಾರ್ವತ್ರಿಕವಾಗುತ್ತವೆ. ಸಂಕ್ಷಿಪ್ತದಲ್ಲಿ, ಇವು ಗೂಂಡಾ ರಾಜ್ಯಗಳಾಗಿವೆ. ಇರಾನ್, ಸೂಡಾನ್, ಅಫ್ಘಾನಿಸ್ತಾನ್ ಹಾಗೂ ಇಸ್ಲಾಮ್, ಮುಸ್ಲಿಮರು ಮತ್ತು ಮುಸ್ಲಿಮೇತರರು ಇಬ್ಬರಿಗೂ ಒಂದು ನೈಜ ಅಪಾಯವಾಗಿದೆ."

ಇಸ್ಲಾಮೀ ಆಂದೋಲನಗಳಿಗೆ ಅಮೇರಿಕ, ಫ್ರಾನ್ಸ್ ಅಥವಾ ರಶ್ಯಾದ ಕ್ರಾಂತಿಗಳಷ್ಟು ಮಹತ್ವವನ್ನು ನೀಡಲಾಗುತ್ತದೆ.

(ನೋಡಿರಿ: Clash of Civilizations - S.P. Huntington Visiting India N.Delhi 1996- P-159)

ಜಿಹಾದನ್ನು ಶಿಲುಬೆ ಯುದ್ಧಕ್ಕೆ ಸಮಾನವೆಂದು ಪರಿಗಣಿಸಲಾಗುತ್ತದೆ. ಅದನ್ನು 'ಪವಿತ್ರ ಯುದ್ಧ'ವೆಂದು ಅನುವಾದಿಸಲಾಗುತ್ತದೆ. ಅದನ್ನು ಶಕ್ತಿಯ ಬಳಕೆಯ ಸಾಧ್ಯತೆಯಿರುವ ಮುಸ್ಲಿಮರ ಎಲ್ಲ ಕಾರ್ಯಾಚರಣೆಗಳ ಜತೆ ತಳಕು ಹಾಕಲಾಗುತ್ತದೆ. ಕೆಲವೊಮ್ಮೆ ತಥಾಕಥಿತ ಹೇಳಿಕೆಯ ಬುನಾದಿಯಲ್ಲಿ ಜಾಗತಿಕ ಚರ್ಚೆಗಳು ನಡೆಯುತ್ತವೆ. ಇನ್ನು ಕೆಲವೊಮ್ಮೆ ಇಂತಹ ತಥಾಕಥಿತ ಹೇಳಿಕೆಗಳ ಆಧಾರದಲ್ಲೇ ಮಾನವಕುಲವನ್ನು ಯುದ್ಧದ ಅಂಚಿಗೆ ತಲುಪಿಸಲು ಪ್ರಯತ್ನಿಸಲಾಗುತ್ತದೆ. ಉದಾ: 1998ರ ಎಪ್ರಿಲ್ 23ರ ಉಸಾಮಾ ಬಿನ್ ಲಾದನ್‌ರ 'ಜಿಹಾದ್' ಫತ್ವಾ. ಅದು ಕಾಲ್ಪನಿಕವಾಗಿತ್ತೆಂಬುದು ಈಗ ವ್ಯಕ್ತವಾಗಿದೆ. ಆದರೂ ಈ ಕಾಲ್ಪನಿಕ ಹೇಳಿಕೆಯ ಆಧಾರದಲ್ಲಿ ವಿಶ್ವವಾಣಿಜ್ಯ ಕೇಂದ್ರದ ಸ್ಫೋಟಕ್ಕೆ ಉಸಾಮಾರನ್ನು ಹೊಣೆಗಾರನೆಂದು ಸಾರಲಾಯಿತು.

## ಸಾಂಸ್ಕೃತಿಕ ಸಂಘರ್ಷವೆಂಬ ಭ್ರಮೆ

ಮಾಧ್ಯಮಗಳು ಇಸ್ಲಾಮನ್ನು ಪಶ್ಚಿಮದ ವೈರಿಯೆಂದು ಸಾಬೀತುಪಡಿಸಲು ಹುಟ್ಟು ಹಾಕಿರುವ ಪಾರಿಭಾಷಿಕಗಳ ಪೈಕಿ ಒಂದು ಸಾಂಸ್ಕೃತಿಕ ಸಂಘರ್ಷವಾಗಿದೆ. ಕೆಲವು ಪಾಶ್ಚಾತ್ಯ ಬುದ್ಧಿಜೀವಿಗಳ ಪ್ರಕಾರ ಇಸ್ಲಾಮ್ ಒಂದು ಅಪರಿಚಿತ ಸಂಸ್ಕೃತಿಯಾಗಿದೆ ಮತ್ತು ಅದು ಪಶ್ಚಿಮದೊಂದಿಗೆ ಬದುಕಿರಲಾರದು.

ಸಾಂಸ್ಕೃತಿಕ ಸಂಘರ್ಷದ ಈ ಸಿದ್ಧಾಂತವು ಮೇಲ್ನೋಟಕ್ಕೆ ತಾರ್ಕಿಕವೆನಿಸುತ್ತದೆ. ಆದರೆ ಘಟನೆಗಳ ನೆಲೆಯಲ್ಲಿ ಅದನ್ನು ಸಾಬೀತುಪಡಿಸುವುದು ಸುಲಭವಲ್ಲ. Huntington ಅದನ್ನು ಸಾಬೀತುಪಡಿಸಲು ಸಾಮಾನ್ಯವಾಗಿ ಸರ್ವೇ ಮತ್ತು ಅಂಕಿ ಅಂಶಗಳನ್ನು ನೆಚ್ಚಿಕೊಂಡಿದ್ದಾನೆ. ಇವುಗಳ ಪೈಕಿ ಕೆಲವು ಸರ್ವೇಗಳಂತೂ ಕೇವಲ ಮನೋರಂಜನೆಯಾಗಿವೆ. ಕೆಲವು ಅಂಕಿ ಅಂಶಗಳು ತಪ್ಪು ದಾರಿಗೆಳೆಯುವಂತಹದ್ದಾಗಿದೆ. ಘಟನೆಗಳ ಲೋಕದಲ್ಲಿ ಅದಕ್ಕೆ ಯಾವ ಮಹತ್ವವೂ ಇಲ್ಲ. ಕೆಲವೊಂದು Huntingtonನ ಬುದ್ಧಿಯ ಸೃಷ್ಟಿಗಳಾಗಿವೆ. ಉದಾ: ಇಸ್ಲಾಮ್ ಮತ್ತು ಕನ್ಫ್ಯೂಶಿಯಸ್‌ನ ಸಂಬಂಧವು ಕೇವಲ ಕಾಲ್ಪನಿಕವಾಗಿದೆ. ಅದೇ ರೀತಿ ಇಸ್ಲಾಮನ್ನು ಅಣುಶಕ್ತಿಯಲ್ಲಿ ಹೆಚ್ಚಳಕ್ಕೆ ಕಾರಣವೆನ್ನುವುದು ಕೂಡಾ ಕೇವಲ ಭ್ರಮೆಯಾಗಿದೆ. ನಮ್ಮ ಅಭಿಪ್ರಾಯದಂತೆ ಸಾಂಸ್ಕೃತಿಕ ಸಂಘರ್ಷದ ಸಿದ್ಧಾಂತವೇ ಸರಿಯಲ್ಲ. ಸಂಸ್ಕೃತಿಗಳು ಪರಸ್ಪರ ಸಂಘರ್ಷಿಸುವುದಿಲ್ಲ. ಬದಲಾಗಿ ಭಯಭೀತಿಗಳು ಪರಸ್ಪರ ಸಂಘರ್ಷಿಸುತ್ತವೆ. ಹಿತಾಸಕ್ತಿಗಳು ಮತ್ತು ಅಹಂಗಳು(Ego) ಪರಸ್ಪರ ಸಂಘರ್ಷಿಸುತ್ತವೆ. ಸಂಘರ್ಷವು ಸಾಮಾನ್ಯವಾಗಿ ಸರಕಾರಗಳ ಮಧ್ಯೆ ನಡೆಯುತ್ತವೆ. ಸಾರ್ವಜನಿಕರ ಮಧ್ಯೆ ಅದು ನಡೆಯುವುದು ಕುಟಿಲ ಆಡಳಿತಗಾರರು ತಮ್ಮ ಹಿತಾಸಕ್ತಿಗಳಿಗಾಗಿ ಸಾರ್ವಜನಿಕರ ಭಾವನೆಗಳನ್ನು ಕೆರಳಿಸಿದಾಗ ಮಾತ್ರ. ಸಂಸ್ಕೃತಿಗಳು ಸದಾ ಕೊಡು-

ಕೊಳ್ಳುವಿಕೆಯ ರೀತಿಯನ್ನು ಅವಲಂಬಿಸುತ್ತವೆ. ಇಸ್ಲಾಮಿ ಇತಿಹಾಸ ಮತ್ತು ಇತರ ಜನಾಂಗಗಳ ಇತಿಹಾಸದಿಂದ ಇದಕ್ಕೆ ಉದಾಹರಣೆಗಳನ್ನು ನೀಡಬಹುದಾಗಿದೆ. ಸ್ವತಃ ಪಾಶ್ಚಾತ್ಯ ಸಂಸ್ಕೃತಿಯು ಅನೇಕ ವಿಷಯಗಳನ್ನು ಇಸ್ಲಾಮಿನಿಂದ ಪಡೆದಿದೆ ಮತ್ತು ಇಸ್ಲಾಮಿ ವಿಚಾರಧಾರೆಯ ನವನಿರ್ಮಾಣದಲ್ಲಿ ಪಾಶ್ಚಾತ್ಯ ವಿಚಾರಧಾರೆಗಳಿಂದ ಬಹಳಷ್ಟು ಪ್ರಯೋಜನ ಪಡೆಯಲಾಗಿದೆ.

ಪಾಶ್ಚಾತ್ಯ ಮಾಧ್ಯಮಗಳು ವಿಭಿನ್ನ ರೀತಿಯಲ್ಲಿ ಇಸ್ಲಾಮಿನ ವಿರುದ್ಧ ವಾತಾವರಣವನ್ನು ಸೃಷ್ಟಿ ಮಾಡುತ್ತಿವೆ. ಎಲ್ಲಾದರೂ ಮುಸ್ಲಿಮರು ಪಾಶ್ಚಾತ್ಯರ ಹಳೆಯ ಆಯುಧಗಳನ್ನು ಖರೀದಿಸಿದರೆ ಇಸ್ಲಾಮಿ ಜಗತ್ತಿನಲ್ಲಿ ಅಪಾಯಕಾರಿ ಭಯೋತ್ಪಾದನೆ ಬೆಳೆಯುತ್ತಿದೆ ಎಂದು ಅವು ಬೊಬ್ಬಿಡುತ್ತವೆ. ಪಶ್ಚಿಮವು ಅಡಿಯಿಂದ ಮುಡಿತನಕ ಆಯುಧದಲ್ಲಿ ಮುಳುಗಿದ್ದರೂ ಅವುಗಳಿಗೆ ಪರಿವೆಯಿಲ್ಲ. ಇಂದು ಲೋಕದ ಎಲ್ಲ ಧರ್ಮಗಳು- ಕ್ರೈಸ್ತ, ಯಹೂದಿ, ಬೌದ್ಧ ಮತ್ತು ಹಿಂದೂ ಧರ್ಮಗಳ- ಬಳಿ ಅಣುಬಾಂಬ್ ಇದೆ. ಆದರೆ ಅವುಗಳ ಪೈಕಿ ಯಾವುದನ್ನೂ ಆ ಧರ್ಮಕ್ಕೆ ಅನ್ವಯಿಸಿ ಹೇಳಲಾಗುವುದಿಲ್ಲ. ಆದರೆ 56 ಮುಸ್ಲಿಮ್ ರಾಷ್ಟ್ರಗಳ ಪೈಕಿ ಕೇವಲ ಒಂದಾದ ಪಾಕಿಸ್ತಾನದಲ್ಲಿ ಅಣುಶಕ್ತಿ ಇರುವುದನ್ನು 'ಇಸ್ಲಾಮಿ ಬಾಂಬ್' ಎನ್ನಲಾಗುತ್ತದೆ.

ಪಶ್ಚಿಮದ ಕೆಲವು ಬುದ್ಧಿಜೀವಿಗಳು ಇಸ್ಲಾಮಿ ಆಂದೋಲನಗಳನ್ನು ಪಶ್ಚಿಮದ ಜತೆ ಯುದ್ಧವೆಂದು ಬಿಂಬಿಸುತ್ತಾರೆ. ಈ ಆಂದೋಲನಗಳ ಅಭಿವೃದ್ಧಿಯನ್ನು ಯುದ್ಧದ ಆರಂಭವೆಂದು ಪರಿಗಣಿಸಲಾಗುತ್ತದೆ. ಉದಾ: ಹಂಟಿಂಗ್ಟನ್ ಹೀಗೆ ಹೇಳುತ್ತಾರೆ:

"ಇರಾನ್ ಕ್ರಾಂತಿಯ ನಂತರ ಪಶ್ಚಿಮ ಮತ್ತು ಇಸ್ಲಾಮ್‌ನ ಮಧ್ಯೆ ಒಂದು ಸಾಂಸ್ಕೃತಿಕ ಯುದ್ಧ ಆರಂಭವಾಗಿದೆ ಎಂಬುದು ಆಶ್ಚರ್ಯಕರ ವಿಷಯವಲ್ಲ."

(Clash of Civilizations, P-216)

ಇಂತಹ ಹೇಳಿಕೆ ಅಥವಾ ವಿಶ್ಲೇಷಣೆಗಳು ಸಾಮಾನ್ಯವಾಗಿ ಇಸ್ಲಾಮ್ ಶಾಂತಿಯ ಶತ್ರು ಮತ್ತು ಭಯೋತ್ಪಾದನೆಯ ಧರ್ಮವೆಂಬ ಕಲ್ಪನೆಯನ್ನು ಪಕ್ಕಗೊಳಿಸುವ ಪ್ರಯತ್ನವಾಗಿವೆ. ವಾಸ್ತವಿಕ ದೃಷ್ಟಿಯಿಂದ ಅವುಗಳಿಗೆ ಯಾವ ಮಹತ್ವವೂ ಇರುವುದಿಲ್ಲ.

## ಭಯೋತ್ಪಾದನೆ ಮತ್ತು ಇಸ್ಲಾಮ್

ಮಾಧ್ಯಮಗಳು ಅದರಲ್ಲೂ ವಿಶೇಷವಾಗಿ ಪಾಶ್ಚಾತ್ಯ ಮಾಧ್ಯಮಗಳು ಯಾವ ರೀತಿ ಇಸ್ಲಾಮ್ ಮತ್ತು ಮುಸ್ಲಿಮರ ಚಿತ್ರವನ್ನು ಕೆಡಿಸುತ್ತಿವೆ ಮತ್ತು ಯಾವ ರೀತಿ ನಿರಂತರ ತಪ್ಪಾದ, ತಲೆಬುಡವಿಲ್ಲದ ಮತ್ತು ಅಸಂಬದ್ಧ ವಿಷಯಗಳನ್ನು ಇಸ್ಲಾಮಿನ ಜತೆಗೆ ಸಂಬಂಧಿಸಿ ಇಸ್ಲಾಮ್ ಮತ್ತು ಮುಸ್ಲಿಮರ ತೇಜೋವಧೆಗೈಯುತ್ತಿದೆಯೆಂಬುದನ್ನು ಹಿಂದಿನ ಪುಟಗಳಲ್ಲಿ ವಿವರಿಸಿರುವೆವು. ಮಾಧ್ಯಮದ ಈ ಕ್ರಮದ ತೆರೆಮರೆಯಲ್ಲಿ ಕಾರ್ಯಾಚರಿಸುತ್ತಿರುವ ಉದ್ದೇಶಗಳಲ್ಲಿ ಕೆಲವು ಅಪ್ಪಟ ಭೌತಿಕವಾಗಿದೆ. ಇನ್ನು ಕೆಲವು ಪಶ್ಚಿಮದ ಸಾಂಸ್ಕೃತಿಕ ಹಿತಾಸಕ್ತಿಗಳು ಮತ್ತು ಪರಂಪರೆಗಳಾಗಿವೆ. ಅವುಗಳ ಪೈಕಿ

ಯಾವುದೂ ಇಸ್ಲಾಮ್ ಮತ್ತು ಮುಸ್ಲಿಮರೊಂದಿಗೆ ಸಂಬಂಧ ಹೊಂದಿಲ್ಲ. ಅದೇ ರೀತಿ ಉನ್ನತ ಮಾನವೀಯ ಹಿತಾಸಕ್ತಿಗಳು, ಮಾನವತೆಯ ಗೌರವ ಮತ್ತು ಮಾನವ ಪ್ರೇಮ ಅದರ ಹಿಂದಿಲ್ಲ.

ಭಯೋತ್ಪಾದನೆಯ ಬಗ್ಗೆ ಇಸ್ಲಾಮಿನ ನಿಲುವು ಸ್ಪಷ್ಟವಾಗಿದೆ. ಇಸ್ಲಾಮ್ ಯಾವುದೇ ರೀತಿಯ ಹಿಂಸೆ, ದೌರ್ಜನ್ಯ ಮತ್ತು ಭಯೋತ್ಪಾದನೆಗೆ ಅನುಮತಿ ನೀಡುವುದಿಲ್ಲ. ಇಸ್ಲಾಮಿನ ದೃಷ್ಟಿಯಲ್ಲಿ ಅನ್ಯಾಯಕ್ಕೆ ಪ್ರತೀಕಾರ ಮಾಡಬಹುದು. ಆದರೆ ಅದು ಅನ್ಯಾಯ ಆದಷ್ಟು ಮಾತ್ರ. ಅದಕ್ಕಿಂತ ಹೆಚ್ಚಾದರೆ ಮರ್ದಿತನೂ ಅಕ್ರಮಿಯ ಸಾಲಿನಲ್ಲಿ ಸೇರುತ್ತಾನೆ.

ಪವಿತ್ರ ಕುರ್‌ಆನ್ ಹೀಗೆ ಹೇಳಿದೆ:

"ನಿಮ್ಮೊಡನೆ ಯುದ್ಧ ಮಾಡುವವರೊಂದಿಗೆ ನೀವೂ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ. ಆದರೆ ಅತಿಕ್ರಮಿಸಬೇಡಿರಿ. ಅಲ್ಲಾಹನು ಅತಿಕ್ರಮಿಸುವವರನ್ನು ಮೆಚ್ಚುವುದಿಲ್ಲ." **(2:190)**

ಇನ್ನೊಂದೆಡೆ ಹೀಗೆ ಆದೇಶಿಸಲಾಗಿದೆ-

"ನಿಮ್ಮ ಮೇಲೆ ಕೈ ಮಾಡಿದವರ ಮೇಲೆ ನೀವೂ ಅದೇ ರೀತಿಯಲ್ಲಿ ಕೈ ಮಾಡಿರಿ. ಆದರೆ ಅಲ್ಲಾಹನ ಭಯವಿರಿಸಿಕೊಳ್ಳಿರಿ. ಅಲ್ಲಾಹನು ಸೀಮೋಲ್ಲಂಘನೆಯನ್ನು ಮಾಡದವರೊಂದಿಗೆ ಮಾತ್ರವಿರುತ್ತಾನೆಂಬುದನ್ನು ನೀವು ತಿಳಿದಿರಬೇಕು." **(2:194)**

ಅನ್ಯಾಯವನ್ನು ಕ್ಷಮಿಸಿ ಬಿಡುವುದು ಉತ್ತಮವೆಂದು ಇಸ್ಲಾಮ್ ಪರಿಗಣಿಸುತ್ತದೆ. ಹಾಗಿರುವಾಗ ಅದು ಅನ್ಯಾಯ-ಅತ್ಯಾಚಾರಗಳಿಗೆ ಅನುಮತಿ ನೀಡುವುದೆಂತು? ಆದ್ದರಿಂದ ಇಸ್ಲಾಮಿನ ನಿಲುವು ಬಹಳ ಸ್ಪಷ್ಟವಿದೆ.

ಭಯೋತ್ಪಾದನೆಯನ್ನು ಒಬ್ಬ ವ್ಯಕ್ತಿಯು ಒಂದು ಸಂಘಟನೆ, ಸಂಸ್ಥೆ ಅಥವಾ ಸರಕಾರದ ವಿರುದ್ಧ ನಡೆಸಲಿ, ಒಂದು ಸರಕಾರವು ವ್ಯಕ್ತಿಗಳ ವಿರುದ್ಧ ನಡೆಸಲಿ, ಒಂದು ಬಹುಸಂಖ್ಯಾತ ಗುಂಪು ಅಲ್ಪಸಂಖ್ಯಾತರ ವಿರುದ್ಧ ನಡೆಸಲಿ ಅಥವಾ ಅಲ್ಪಸಂಖ್ಯಾತರು ಬಹುಸಂಖ್ಯಾತರ ವಿರುದ್ಧ ನಡೆಸಲಿ. ಅದು ಯಾವುದೇ ರೀತಿಯ ವೈಯಕ್ತಿಕ ಮತ್ತು ಸಂಘಟಿತ ಭಯೋತ್ಪಾದನೆಯಾಗಿರಲಿ ಇಸ್ಲಾಮ್ ಅದನ್ನು ನಿಷಿದ್ಧವೆಂದು ಸಾರುತ್ತದೆ.

ಇಸ್ಲಾಮ್ ವ್ಯಕ್ತಿಯ ಹಕ್ಕುಗಳ ಸಂರಕ್ಷಣೆಯ ಹೊಣೆಯನ್ನು ಸರಕಾರದ ಮೇಲೆ ಇರಿಸುತ್ತದೆ. ಜಾತಿ, ಧರ್ಮಗಳ ಭೇದವಿಲ್ಲದೆ ತನ್ನ ನಾಗರಿಕರ ರಕ್ಷಣೆ ಮಾಡುವುದು ಅದರ ಕರ್ತವ್ಯವಾಗಿದೆ. ಎಲ್ಲಿಯವರೆಗೆಂದರೆ ಯುದ್ಧನಿರತ ಜನಾಂಗದ ವ್ಯಕ್ತಿ ಕೂಡಾ ಬಂದು ಅಭಯ ಯಾಚಿಸಿದರೆ ಆತನ ಸಂರಕ್ಷಣೆಯೂ ಸರಕಾರದ ಕರ್ತವ್ಯವಾಗಿದೆ. ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳು ಮತ್ತು ಅಭಯ ಪಡೆದವರ ಹಕ್ಕುಗಳು ಸುವ್ಯಕ್ತವಾಗಿವೆ ಮತ್ತು ಅವು ಇಸ್ಲಾಮೀ ಸಂವಿಧಾನದ ಅಂಗವಾಗಿದೆ.

ಇಂದಿನ ಯುಗದಲ್ಲಿ ಆಗುವ ಕೊಲೆ-ರಕ್ತಪಾತವನ್ನು ಕೆಲವೆಡೆ ಭಯೋತ್ಪಾದನೆ, ಕೆಲವೆಡೆ ಸಾಂಸ್ಕೃತಿಕ ಸಂಘರ್ಷ ಮತ್ತು ಕೆಲವೆಡೆ ಧರ್ಮಾಂಧತೆಯ ಆಕ್ರಮಣವೆನ್ನಲಾಗುತ್ತದೆ. ಅದನ್ನು ವಿಶ್ಲೇಷಿಸಿದರೆ ಸಾಮಾನ್ಯವಾಗಿ ಮೂರು ರೂಪಗಳು ಮುಂದೆ ಬರುತ್ತವೆ.

1. ನಿರಪರಾಧಿಗಳನ್ನು ಕೊಲ್ಲುವುದು.

2. ಒಂದೆಡೆ ಆದ ಅನ್ಯಾಯಕ್ಕೆ ಇನ್ನೊಂದೆಡೆಯ ಜನರಲ್ಲಿ ಸೇಡು ತೀರಿಸುವುದು.

3. ಸಾರ್ವಜನಿಕರ ಗಮನ ತನ್ನೆಡೆಗೆ ಸೆಳೆಯಲು ಸಂಬಂಧವಿಲ್ಲದ ಜನರ ಮೇಲೆ ಅಕ್ರಮವೆಸಗುವುದು.

ಇಸ್ಲಾಮ್ ಈ ಎಲ್ಲ ಸ್ವರೂಪಗಳನ್ನು ನಿಷಿದ್ಧವೆಂದು ಸಾರಿದೆ. ಇಸ್ಲಾಮಿನ ದೃಷ್ಟಿಯಲ್ಲಿ ಈ ಮೂರು ವಿಧಗಳು ಮತ್ತು ಇಂತಹ ಇತರ ಕೆಲಸಗಳು ಅನ್ಯಾಯ-ಅತ್ಯಾಚಾರಗಳ ಸಾಲಿಗೆ ಸೇರುತ್ತವೆ.

## ನಿರಪರಾಧಿಗಳ ಹತ್ಯೆ

ಇಸ್ಲಾಮ್ ಅನ್ಯಾಯದ ಕೊಲೆಯನ್ನು ವಿರೋಧಿಸುತ್ತದೆ. ಅದರ ದೃಷ್ಟಿಯಲ್ಲಿ ಒಬ್ಬ ವ್ಯಕ್ತಿಯ ಕೊಲೆಯು ಇಡೀ ಮಾನವಕುಲದ ಕೊಲೆಗೆ ಸಮಾನವಾಗಿದೆ. ಪವಿತ್ರ ಕುರ್‌ಆನ್ ಹೀಗೆ ಹೇಳಿದೆ:

**"ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾರಣಕ್ಕಾಗಿ ಹೊರತು ಯಾರಾದರೂ ಒಬ್ಬ ಮನುಷ್ಯನನ್ನು ವಧಿಸಿದರೆ ಅವನು ಸಕಲ ಮಾನವ ಕೋಟಿಯನ್ನೇ ವಧಿಸಿದಂತೆ ಮತ್ತು ಒಬ್ಬನು ಇನ್ನೊಬ್ಬನಿಗೆ ಜೀವದಾನ ಮಾಡಿದರೆ ಅವನು ಸಕಲ ಮಾನವ ಕೋಟಿಗೆ ಜೀವದಾನ ಮಾಡಿದಂತೆ." (5:32)**

ಇಸ್ಲಾಮಿನ ದೃಷ್ಟಿಯಲ್ಲಿ ಒಬ್ಬನ ಕೊಲೆಯು ಇಡೀ ಮಾನವಕುಲದ ಕೊಲೆಗೆ ಮತ್ತು ಒಬ್ಬನ ಜೀವ ರಕ್ಷಣೆಯು ಇಡೀ ಮಾನವಕುಲದ ಜೀವದಾನಕ್ಕೆ ಸಮಾನವಾಗಿದೆ. ಕ್ಷೋಭೆ-ಗಲಭೆ ಮತ್ತು ಭಯೋತ್ಪಾದನೆಯಲ್ಲಿ ಮಾನವ ಜೀವನದ ಗೌರವವು ತುಳಿಯಲ್ಪಡುತ್ತದೆ. ಆದ್ದರಿಂದ ಇಸ್ಲಾಮ್ ಅದನ್ನು ಕೊಲೆಗಿಂತಲೂ ದೊಡ್ಡ ಅಪರಾಧ ವೆಂದು ಪರಿಗಣಿಸುತ್ತದೆ. ಇಸ್ಲಾಮಿನ ದೃಷ್ಟಿಯಲ್ಲಿ ಮೂರು ಅತಿದೊಡ್ಡ ಅಪರಾಧಗಳಲ್ಲಿ ಅನ್ಯಾಯದ ಕೊಲೆಯೂ ಸೇರಿದೆ.

ಒಂದು ಪ್ರವಾದಿ ವಚನ ಹೀಗಿದೆ-

ಅಲ್ಲಾಹನ ಬಳಿ ಅತಿದೊಡ್ಡ ಅಪರಾಧ ದೇವನ ಸಹಭಾಗಿತ್ವ, ಕೊಲೆ ಮತ್ತು ತಂದೆ-ತಾಯಿಗಳ ಅವಿಧೇಯತೆಯಾಗಿದೆ. (ಬುಖಾರಿ)

ಮಾನವ ಪ್ರಾಣದ ವಧೆಯು ಧರ್ಮ ಬಾಹಿರವಾಗಿದೆಯೆಂದು ಕುರ್‌ಆನ್ ಮತ್ತು ಪ್ರವಾದಿ ವಚನಗಳಿಂದ ಸಾಬೀತಾಗಿದೆ. ಯಾವನೇ ವ್ಯಕ್ತಿಗೆ, ಧಾರ್ಮಿಕ ಅಥವಾ ರಾಜಕೀಯ ಹುದ್ದೆಯುಳ್ಳವನಿಗೆ ಯಾರನ್ನೂ ಕೊಲೆ ಮಾಡುವ ಅಧಿಕಾರವಿಲ್ಲ. ಯಾವನೇ ಮುಫ್ತಿಯ ಫತ್ವಾ (ಧರ್ಮವಿಧಿ) ಅಥವಾ ರಾಜಕೀಯ ನಾಯಕನ ಬಯಕೆಯನ್ನು ಯಾರದೇ ಕೊಲೆಗೆ ಸೂಕ್ತ ಕಾರಣವೆಂದು ಪರಿಗಣಿಸಲಾಗದು. ಇಸ್ಲಾಮ್ ಕೇವಲ ನ್ಯಾಯದ ಆಧಾರದಲ್ಲಿ ಮಾತ್ರ ಯಾವನೇ ಮನುಷ್ಯನ ಕೊಲೆಯನ್ನು ಅನುಮತಿಸಿದೆ. ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

ಯಾವ ಜೀವವನ್ನೂ ಅನ್ಯಾಯವಾಗಿ ಕೊಲೆ ಮಾಡಬೇಡಿರಿ. (6:151)

ಇದರ ಅಧಿಕಾರವು ಕೇವಲ ಸರಕಾರಕ್ಕಿದೆ. ಯಾವನೇ ವ್ಯಕ್ತಿ ಅಥವಾ ಯಾವುದೇ ಸಂಘಟನೆಗೆ ಇಲ್ಲ. ಸರಕಾರ ಮಾತ್ರ ಒಬ್ಬ ಅಪರಾಧಿಯನ್ನು ನ್ಯಾಯಾಲಯದ ತೀರ್ಪಿನಂತೆ ವಧಿಸಬಹುದು. ಇಸ್ಲಾಮಿನಲ್ಲಿ ನ್ಯಾಯಸಮ್ಮತವಾಗಿ ವಧಿಸುವ ಕೇವಲ ಮೂರು ರೂಪಗಳಿವೆ:

1. ವಿವಾಹಿತನಾಗಿದ್ದೂ ವ್ಯಭಿಚಾರವೆಸಗಿದವನು.
2. ಇನ್ನೊಬ್ಬನನ್ನು ಕೊಲೆ ಮಾಡಿದವನು.
3. ಭೂಮುಖದಲ್ಲಿ ಕ್ಷೋಭೆಯನ್ನು ಹರಡಿದವನು ಅಥವಾ ಧರ್ಮತ್ಯಾಗ ಮಾಡಿ ಇಸ್ಲಾಮೀ ಸರಕಾರದ ವಿರುದ್ಧ ಬಂಡಾಯ ಹೂಡಿದವನು.

ಪ್ರಸ್ತುತ ಮೂರು ರೂಪಗಳಲ್ಲದೆ ಮಾನವನ ರಕ್ತವು ಧರ್ಮಸಮ್ಮತವಾಗುವ ನಾಲ್ಕನೆಯ ರೂಪವಿಲ್ಲ. ಈ ಮೂರು ರೂಪಗಳಲ್ಲೂ ಶರೀಅತ್‌ನ ವಿಧಿಯನ್ನು ಜಾರಿಗೊಳಿಸುವ ಹಕ್ಕು ಕೇವಲ ಸರಕಾರಕ್ಕಿದೆ. ಯಾವನೇ ವ್ಯಕ್ತಿ ಅಥವಾ ಯಾವುದೇ ಸಂಘಟನೆಗೆ ಈ ಹಕ್ಕಿಲ್ಲ. ಸರಕಾರ ಕೂಡಾ ತಾನಾಗಿಯೇ ಯಾರಿಗೂ ಕೊಲೆ ಶಿಕ್ಷೆಯನ್ನು ವಿಧಿಸುವ ಅಧಿಕಾರವನ್ನು ಹೊಂದಿಲ್ಲ. ನ್ಯಾಯಾಲಯದಲ್ಲಿ ಕಾನೂನಿನ ಪ್ರಕಾರ ಆರೋಪಿಯ ಮೇಲೆ ಮೊಕದ್ದಮೆ ಹೂಡಬೇಕು ಮತ್ತು ನ್ಯಾಯಾಲಯದ ತೀರ್ಪು ಬಂದ ನಂತರ ಅದನ್ನು ಜಾರಿಗೊಳಿಸಬೇಕು. ನ್ಯಾಯಾಲಯವು ಮರಣದಂಡನೆ ವಿಧಿಸಿದರೆ ಅದನ್ನು ಸರಕಾರ ಜಾರಿ ಗೊಳಿಸಬಹುದು ಅನ್ಯಥಾ ಸರಕಾರಕ್ಕೂ ವಧೆ ಶಿಕ್ಷೆಯನ್ನು ಜಾರಿಗೊಳಿಸುವ ಹಕ್ಕಿಲ್ಲ.

ಮೊಕದ್ದಮೆಯಲ್ಲಿ ಸಂಶಯ ಉಂಟಾದರೆ ಅಥವಾ ಕಿಸಾಸ್(ಪ್ರತೀಕಾರ)ನ ವಿಷಯದಲ್ಲಿ ಕೊಲ್ಲಲ್ಪಟ್ಟವನ ವಾರೀಸುದಾರರು ಪರಿಹಾರ ಧನ ಸ್ವೀಕರಿಸಿ ಕ್ಷಮಿಸಲು ಸಿದ್ಧವಾದರೆ ಅಂತಹ ಸ್ಥಿತಿಯಲ್ಲಿ ಪ್ರಾಣಹರಣ ಮಾಡುವ ಹಕ್ಕು ಸರಕಾರಕ್ಕೆ ಇರುವುದಿಲ್ಲ.

(ಅಬೂದಾವೂದ್, ಕಿತಾಬುಲ್ ಹುದೂದ್)

ಒಬ್ಬ ಕೊಲೆಗಾರನನ್ನು ವಧಿಸುವುದು ಬಾಹ್ಯನೋಟಕ್ಕೆ ಪ್ರಾಣಹರಣವಾಗಿ ಕಂಡರೂ ಅದು ತನ್ನ ಪರಿಣಾಮದ ದೃಷ್ಟಿಯಿಂದ ಪ್ರಾಣ ಉಳಿಸುವುದಾಗಿದೆ. ಸಮಾಜದಲ್ಲಿ ಓರ್ವ ಕೊಲೆಗಾರನ ಅಸ್ತಿತ್ವವು ಇಡೀ ಸಮಾಜದ ಶಾಂತಿ ಮತ್ತು ಪಾವಿತ್ರ್ಯವನ್ನು ಹಾಳು ಮಾಡುತ್ತದೆ ಮತ್ತು ಸಮಾಜವನ್ನು ಅರಕ್ಷಿತತೆಯಲ್ಲಿ ಸಿಲುಕಿಸುತ್ತದೆ. ಆದ್ದರಿಂದ ಪವಿತ್ರ ಕುರ್‌ಆನಿನಲ್ಲಿ ಕಿಸಾಸ್ ಅಥವಾ ಕೊಲೆಯ ಪ್ರತೀಕಾರವನ್ನು ಜೀವನವೆನ್ನಲಾಗಿದೆ-

"ಓ ಬುದ್ಧಿಜೀವಿಗಳೇ! 'ಕಿಸಾಸ್'ನಲ್ಲಿ (ಪ್ರತೀಕಾರ) ನಿಮಗೆ ಜೀವನವಿದೆ. ನೀವು ಈ ಕಾನೂನಿನ ಉಲ್ಲಂಘನೆಯಿಂದ ದೂರವಿರುವಿರೆಂದು ಆಶಿಸಲಾಗುತ್ತದೆ." (2:179)

ಯಾವ ಸಮಾಜದಲ್ಲಿ ಎಲ್ಲಾ ರೀತಿಯ ಅಪರಾಧಿಗಳಿಗೆ ಕೇವಲ ಮಾನವಹಕ್ಕುಗಳ ಹೆಸರಿನಲ್ಲಿ ಅಪರಾಧವೆಸಗುವ ಮುಕ್ತ ಪರವಾನಿಗೆ ನೀಡಲಾಗುತ್ತದೋ ಅದರಲ್ಲಿ ಅಪರಾಧಗಳು ಹಲುಸಾಗಿ ಬೆಳೆಯುತ್ತವೆ. ಅಲ್ಲಿ ಮಾನವ ಪ್ರಾಣದ ಪಾವಿತ್ರ್ಯವು ಹಾಳಾಗುತ್ತದೆ.

## ಅನ್ಯಾಯದ ಪ್ರತೀಕಾರ ಅನ್ಯಾಯವೆಸಗಿದವನಿಂದ ಮಾತ್ರ

ಒಂದು ಕಡೆಯಲ್ಲಾದ ಅನ್ಯಾಯದ ಪ್ರತೀಕಾರ ಇನ್ನೊಂದೆಡೆಯ ಜನರಿಂದ ಪಡೆಯುವುದು ಕೂಡಾ ಭಯೋತ್ಪಾದನೆ ಮತ್ತು ತೀವ್ರವಾದದ ಸಾಲಿಗೆ ಸೇರುತ್ತದೆ. ಅದರ ವಿಭಿನ್ನ ರೂಪಗಳಿವೆ. ಉದಾ: ಒಂದು ಕಡೆ ಒಂದು ವರ್ಗ ಧಾರ್ಮಿಕ, ಭಾಷೀಯ ಅಥವಾ ಭೌಗೋಳಿಕ ಗುರುತಿನ ಕಾರಣದಿಂದ ಇನ್ನೊಂದು ವರ್ಗದ ಮೇಲೆ ಅನ್ಯಾಯವೆಸಗುತ್ತದೆ. ಇನ್ನೊಂದು ವರ್ಗವು ಬಲಹೀನವಾಗಿದೆ. ಆದರೆ ಆ ಮರ್ದಿತ ವರ್ಗಕ್ಕೆ ಸೇರಿದ ಜನರು ಇತರ ಕಡೆ ಶಕ್ತಿಶಾಲಿಗಳಾಗಿದ್ದು ಅಲ್ಲಿ ಇನ್ನೊಂದು ವರ್ಗವು ಬಲಹೀನವಾಗಿದೆ. ಇಂತಹ ಸಂದರ್ಭದಲ್ಲಿ ಮೊದಲ ವರ್ಗವು ಎರಡನೆಯ ವರ್ಗವನ್ನು ತನ್ನ ಮೇಲೆ ನಡೆದ ದೌರ್ಜನ್ಯಗಳಿಗೆ ಪ್ರತಿಯಾಗಿ ಅಕ್ರಮಕ್ಕೆ ಗುರಿ ಪಡಿಸುತ್ತದೆ. ಉದಾ: ದೆಹಲಿ ಮತ್ತು ಅದರ ಪರಿಸರದಲ್ಲಿ ಹಿಂದೂಗಳು ಸಿಕ್ಖರ ಸಾಮೂಹಿಕ ಹತ್ಯೆ ಮಾಡುತ್ತಾರೆ. ಅದಕ್ಕೆ ಪ್ರತಿಯಾಗಿ ಪಂಜಾಬಿನ ಸಿಕ್ಖರು ಅಲ್ಲಿನ ಹಿಂದೂಗಳನ್ನು ಹತ್ಯೆ ಮಾಡುವುದು. ಅಫಘಾನಿಸ್ತಾನದಲ್ಲಿ ಬುದ್ಧನ ಮೂರ್ತಿಯನ್ನು ಒಡೆದಾಗ ಅದರ ಪ್ರತೀಕಾರ ಭಾರತೀಯ ಮುಸ್ಲಿಮರಿಂದ ಪಡೆಯುವುದು. ಇಂತಹ ಆಕ್ರಮಣದ ವಿವಿಧ ರೂಪಗಳಿರಬಹುದು. ಅದು ಒಂದೇ ಪ್ರದೇಶದೊಳಗೆ ಆಗಬಹುದು. ಉದಾ: ತಮಿಳು ಬಹುಸಂಖ್ಯಾತ ಪ್ರದೇಶದಲ್ಲಿ ಶ್ರೀಲಂಕಾದ ಬೌದ್ಧರ ಸಮಸ್ಯೆ. ಕಾಶ್ಮೀರದಲ್ಲಿ ಹಿಂದೂಗಳ ಸಮಸ್ಯೆ. ಈ ಆಕ್ರಮಣವು ಅಂತಾರಾಷ್ಟ್ರೀಯ ನೆಲೆಯಲ್ಲೂ ಆಗಿರಬಹುದು. ಇತ್ತೀಚೆಗೆ ಅಮೇರಿಕದ ವಿಶ್ವವಾಣಿಜ್ಯ ಕೇಂದ್ರದಲ್ಲಿ ಸ್ಫೋಟವಾಯಿತು. ಅದರ ಶಂಕಿತ ಆರೋಪಿಗಳಲ್ಲಿ ಉಸಾಮಾ ಬಿನ್ ಲಾದನ್‌ನ ಹೆಸರು ಬರುತ್ತದೆ. ಈ ಕಾರಣದಿಂದ ಅನೇಕ ಕ್ರೈಸ್ತ ರಾಷ್ಟ್ರಗಳಲ್ಲಿ ಮುಸ್ಲಿಮರ ಪ್ರಾಣ, ಸೊತ್ತು-ವಿತ್ತಗಳು ಮತ್ತು ಆರಾಧನಾಲಯಗಳ ಮೇಲೆ ದಾಳಿ ನಡೆಯಿತು. ಕೇವಲ ಅಮೇರಿಕದಲ್ಲಿ ಇಂತಹ 250 ದಾಳಿಗಳು ನಡೆದಿವೆ. ಕೆನಡಾ, ಬ್ರಿಟನ್, ಆಸ್ಟ್ರೇಲಿಯಾ ಮುಂತಾದ ರಾಷ್ಟ್ರಗಳಲ್ಲೂ ಇಂತಹ ದಾಳಿಗಳು ನಡೆದಿವೆ. ಇಸ್ಲಾಮ್ ಇಂತಹ ಎಲ್ಲ ಸ್ವರೂಪದ ಪ್ರತೀಕಾರಗಳನ್ನು ಬಲವಾಗಿ ಖಂಡಿಸುತ್ತದೆ. ಕುರ್‌ಆನ್ ಹೇಳುತ್ತದೆ:

**"ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆ ಹೊರಲಾರನು."**

**(53:38)**

ಇಸ್ಲಾಮಿನ ಪ್ರಕಾರ ಅನ್ಯಾಯ ಮಾಡಿದವರಿಂದ ಮಾತ್ರ ಅನ್ಯಾಯಕ್ಕೆ ಸಮಾನವಾದ ಪ್ರತೀಕಾರವನ್ನು ಪಡೆಯುವ ಹಕ್ಕಿದೆ. ಈ ಹಕ್ಕು ಕೂಡಾ ಬೇಷರತ್ ಅಲ್ಲ. ಅಕ್ರಮಿಯ ಹೊರತು ಆತನ ಧರ್ಮ, ವಂಶ, ಜಾತಿ ಮತ್ತು ಭಾಷೆಯ ಇನ್ನೊಬ್ಬನಿಂದ ಪ್ರತೀಕಾರ ಪಡೆಯಬಾರದು. ಯಾವುದೇ ಮಾನವ ವರ್ಗಕ್ಕೆ ಅದು ತನ್ನ ವರ್ಗದ ಇನ್ನೊಂದು ವಿಭಾಗಕ್ಕೆ ಅನ್ಯಾಯ ಮಾಡುವಂತಹ ಹಕ್ಕನ್ನು ಇಸ್ಲಾಮ್ ನೀಡುವುದಿಲ್ಲ. ಅಕ್ರಮ-ಅನ್ಯಾಯಗಳು ಯಾವ ರೂಪದಲ್ಲೂ ಧರ್ಮಸಮ್ಮತವೆನಿಸಲಾರವು. ಕೇವಲ ಸಮಾನ ಪ್ರತೀಕಾರವನ್ನು ಪಡೆಯಬಹುದು. ಅದೂ ಅಕ್ರಮ ಎಸಗಿದವರಿಂದ ಮಾತ್ರ.

ಅಕ್ರಮ-ಅತ್ಯಾಚಾರಗಳ ಈ ಸ್ವರೂಪವು ಯಾವುದಾದರೊಂದು ರೀತಿಯಲ್ಲಿ ಸದಾ ಅಸ್ತಿತ್ವದಲ್ಲಿತ್ತು. ಇಂದಿನ ಕಾಲದಲ್ಲಿ ಅದರ ವ್ಯಾಪ್ತಿ ಅತ್ಯಂತ ವಿಶಾಲವಾಗಿದೆ. ಕೆಲವೆಡೆ ಧರ್ಮದ ಹೆಸರಲ್ಲಿ. ಇನ್ನು ಕೆಲವೆಡೆ ವರ್ಣ, ವರ್ಗ, ಜಾತಿ, ಭಾಷೆಗಳ ಹೆಸರಲ್ಲಿ. ದೇಶ, ಜನಾಂಗ, ಭಾಷೆ, ಪ್ರದೇಶ ಮತ್ತು ಧರ್ಮದ ಬುನಾದಿಯಲ್ಲಿ ಯಾರನ್ನೂ ಕೊಲೆ ಮಾಡುವುದು ಧರ್ಮಸಮ್ಮತವಲ್ಲ. ಈ ಬಗ್ಗೆ ಪವಿತ್ರ ಕುರ್‌ಆನಿನ ಎರಡು ವಚನಗಳಿಂದ ಬೆಳಕು ಸಿಗುತ್ತದೆ. ಒಂದು ವಚನದ ಪ್ರಕಾರ ಯಾವುದೇ ಬಹುದೇವ ವಿಶ್ವಾಸಿ ರಾಷ್ಟ್ರದೊಂದಿಗೆ ನಿಮ್ಮ ಒಪ್ಪಂದವಾಗಿದ್ದು, ಆ ಬಹುದೇವ ವಿಶ್ವಾಸಿ ರಾಷ್ಟ್ರ ತನ್ನಲ್ಲಿ ವಾಸಿಸುವ ಮುಸ್ಲಿಮರ ಮೇಲೆ ಅನ್ಯಾಯ-ಅತ್ಯಾಚಾರಗಳನ್ನೆಸಗುತ್ತಿದ್ದರೆ ಹಾಗೂ ಅಲ್ಲಿನ ಮುಸ್ಲಿಮರು ಸಹಾಯಕ್ಕಾಗಿ ಯಾಚಿಸಿದರೆ ಆಗಲೂ ಒಪ್ಪಂದ ಮಾಡಿದ ಮುಸ್ಲಿಮರು ತಮ್ಮ ಒಪ್ಪಂದವನ್ನು ಮುರಿದು ಅಲ್ಲಿನ ಮುಸ್ಲಿಮರಿಗೆ ಸಹಾಯ ಮಾಡುವುದು ಧರ್ಮಸಮ್ಮತವಲ್ಲ.

**"ಅವರು ಧರ್ಮ ಕಾರ್ಯದಲ್ಲಿ ನಿಮ್ಮಿಂದ ಸಹಾಯ ಕೋರಿದರೆ ಅವರಿಗೆ ಸಹಾಯ ಮಾಡಬೇಕಾದುದು ನಿಮ್ಮ ಮೇಲೆ ಕಡ್ಡಾಯವಾಗಿದೆ. ಆದರೆ, ಇದು ನಿಮ್ಮೊಂದಿಗೆ ಒಪ್ಪಂದಬದ್ಧ ಜನಾಂಗದ ವಿರುದ್ಧವಾಗಿರಬಾರದು." (ಪವಿತ್ರ ಕುರ್‌ಆನ್, 8:72)**

ಪವಿತ್ರ ಕುರ್‌ಆನಿನ ಉದ್ದೇಶವೇನೆಂದರೆ ಧರ್ಮವು ಸಮುದಾಯದ ಬುನಾದಿಯಾಗಿದ್ದರೂ ಮತ್ತು ಅದರಿಂದಾಗಿ ಎಲ್ಲ ಮುಸ್ಲಿಮರೂ ಒಂದೇ ಶರೀರದಂತೆ ಆಗಿದ್ದರೂ ಲೋಕದ ವ್ಯವಸ್ಥೆಯನ್ನು ಸರಿಯಾಗಿರಿಸಲು ಯಾವ ಒಪ್ಪಂದಗಳು ಮತ್ತು ನಿಯಮಗಳ ಅಗತ್ಯವಿದೆಯೋ ಅವುಗಳನ್ನು ಎಂದಿಗೂ ಈ ಸಮುದಾಯಕ್ಕಾಗಿ ಮುರಿಯಲಾಗದು. ಮುಸ್ಲಿಮರು ಎಲ್ಲಾದರೂ ಶೋಷಣೆಗೆ ಒಳಗಾಗಿದ್ದರೆ ಅವರಿಗೆ ಖಂಡಿತ ನೆರವಾಗಬೇಕು. ಆದರೆ ಅನ್ಯಾಯ ಎಸಗುವವರು ಮುಸ್ಲಿಮ್ ರಾಷ್ಟ್ರದ ಜತೆ ಒಪ್ಪಂದ ಮಾಡಿದವರಾಗಿದ್ದರೆ ಆ ಒಪ್ಪಂದವು ಚಾಲ್ತಿಯಲ್ಲಿರುವ ತನಕ ಅವರಿಗೆ ಸಹಾಯ ಮಾಡಲಾಗದು. ಈ ನೆರವು ಸೈನಿಕ ಮತ್ತು ಆಯುಧದ ನೆರವು ಎಂಬುದು ಸ್ಪಷ್ಟ. ಆದರೆ ಅವರಿಗಾಗಿ ಪ್ರಾರ್ಥಿಸುವುದು, ಅನ್ಯಾಯ ಎಸಗುವವರೊಂದಿಗೆ ಮಾತುಕತೆ ನಡೆಸಿ ಶೋಷಣೆ ನಿಲ್ಲಿಸುವಂತೆ ಅವರ ಮನವೊಲಿಸುವುದು, ಸಾಧ್ಯವಾದರೆ ಆ ಮುಸ್ಲಿಮರನ್ನು ತಮ್ಮ ಪ್ರದೇಶಕ್ಕೆ ತರುವುದು ಅಥವಾ ಇಂತಹುದೇ ಇತರ ನೈತಿಕ, ಭೌತಿಕ ಸಹಾಯವನ್ನು ಮಾಡಬಹುದು.

"ಯಾರಾದರೂ ಒಬ್ಬ ಒಪ್ಪಂದ ಬದ್ಧ ವ್ಯಕ್ತಿಯನ್ನು ಕೊಂದರೆ ಅವನು ಸ್ವರ್ಗದ ಪರಿಮಳವನ್ನೂ ಮೂಸಲಾರ. ವಸ್ತುತಃ ಅದರ ಪರಿಮಳವು ಬಹಳ ದೂರದ ತನಕ ಪಸರಿಸುವುದು." (ಬುಖಾರಿ)

ಅದೇ ರೀತಿ ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳ ಪ್ರಾಣವೂ ಬಹಳ ಪವಿತ್ರವಾಗಿದೆ. ಒಂದು ಪ್ರವಾದಿ ವಚನದಲ್ಲಿ ಹೀಗಿದೆ:

ಯಾರು ನಮ್ಮ ರಕ್ಷಣೆಯಲ್ಲಿರುವನೋ ಅವನ ಪ್ರಾಣ ನಮ್ಮ ಪ್ರಾಣದಂತಿದೆ. ಕೊಲೆಗೆ ಪ್ರತಿಯಾಗಿ ಅವನ ಪರಿಹಾರ ಧನ ನಮ್ಮ ಪರಿಹಾರ ಧನದಂತಿದೆ.

ಈ ಹದೀಸ್‌ಗಳಿಂದ ತಿಳಿದು ಬರುವುದೇನೆಂದರೆ ಆ ವ್ಯಕ್ತಿಗಳ ವಿರುದ್ಧ ಯಾವುದೇ ಅಪರಾಧ ಸಾಬೀತಾಗದಿದ್ದರೆ ಅವರ ಧರ್ಮದವರು ಮಾಡಿದ ಕೃತ್ಯಕ್ಕೆ ಅಥವಾ ಅವರ ದೇಶದ ಕೃತ್ಯಗಳಿಗಾಗಿ ಅವರಿಗೆ ಯಾವುದೇ ಹಾನಿ ಉಂಟು ಮಾಡಲಾಗದು. ಇಸ್ಲಾಮಿ ಇತಿಹಾಸದಲ್ಲಿ ಎಂದೂ ಮುಸ್ಲಿಮರು ತಮ್ಮೊಂದಿಗೆ ಯುದ್ಧ ನಿರತ ಜನರ ಧರ್ಮಕ್ಕೆ ಸೇರಿದವರು ತಮ್ಮಲ್ಲಿ ಇದ್ದರೆ ಅವರಿಗೆ ಯಾವುದೇ ಹಾನಿ ಉಂಟು ಮಾಡಲಿಲ್ಲ. ಇದರ ಅನೇಕ ನಿದರ್ಶನಗಳಿವೆ.

ಉದಾ: ಇಸ್ಲಾಮಿ ಸೈನ್ಯವು ಸಿರಿಯಾ ಮತ್ತು ಈಜಿಪ್ಟ್‌ನ ಕ್ರೈಸ್ತರ ಜತೆ ಹೋರಾಟ ಮಾಡುತ್ತಿದ್ದಾಗ ಒಂದು ದೊಡ್ಡ ಸಂಖ್ಯೆಯ ಕ್ರೈಸ್ತರು ಇಸ್ಲಾಮಿ ರಾಷ್ಟ್ರದ ಪ್ರಜೆಗಳಾಗಿದ್ದರು. ಆದರೆ ಅವರಿಗೆ ಯಾವುದೇ ರೀತಿಯ ಹಾನಿ ಉಂಟು ಮಾಡಲಿಲ್ಲ. ಶಿಲುಬೆ ಯುದ್ಧದ ಕಾಲದಲ್ಲಿ ಕ್ರೈಸ್ತರು ಫೆಲೆಸ್ತೀನ್, ಸಿರಿಯಾ ಮತ್ತು ಇತರ ಅನೇಕ ಕಡೆಗಳಲ್ಲಿ ಮುಸ್ಲಿಮರ ಜತೆ ಶಾಂತಿ-ಸಮಾಧಾನದಿಂದ ಬಾಳುತ್ತಿದ್ದರು. ಅವರು ಯುದ್ಧ ನಿರತ ಜನಾಂಗದ ಧರ್ಮಕ್ಕೆ ಸೇರಿದವರೆಂಬ ಕಾರಣಕ್ಕಾಗಿ ಎಲ್ಲೂ ಅವರಿಗೆ ಯಾವುದೇ ರೀತಿಯಲ್ಲಿ ಹಾನಿಯುಂಟು ಮಾಡಲಿಲ್ಲ.

## ಸಾರ್ವಜನಿಕ ಗಮನವನ್ನು ಸೆಳೆಯಲಿಕ್ಕಾಗಿ ಅಕ್ರಮ

ಭಯೋತ್ಪಾದನೆಯ ಈ ವಿಧಾನವು ಆಧುನಿಕ ಯುಗದ ಉತ್ಪತ್ತಿಯಾಗಿದೆ. ವಿಭಿನ್ನ ರಾಷ್ಟ್ರಗಳು ಸಾಮೂಹಿಕ ಒಪ್ಪಂದದ ಮೂಲಕ ಪರಸ್ಪರ ಸಹಕಾರವನ್ನು ಬೆಳೆಸುವ ಮಟ್ಟಕ್ಕೆ ಅಂತಾರಾಷ್ಟ್ರೀಯ ಕಾನೂನುಗಳು ತಲುಪಿದಾಗ ಒಂದು ಸಮಸ್ಯೆ ಹುಟ್ಟಿಕೊಂಡಿತು. ಅನೇಕ ಆಡಳಿತಾರೂಢ ಜನಾಂಗಗಳು ತಮ್ಮ ಅಧೀನವಿರುವ ಜನಾಂಗಗಳನ್ನು ಈ ಒಪ್ಪಂದದ ಆಧಾರದಲ್ಲಿ ವಿವಶಗೊಳಿಸಿದಾಗ ತಮ್ಮ ಅಭಿಪ್ರಾಯವನ್ನು ಒಪ್ಪಿಸಲು ಅಥವಾ ಸಾರ್ವಜನಿಕ ಗಮನವನ್ನು ತಮ್ಮ ಸಮಸ್ಯೆಗಳೆಡೆಗೆ ಸೆಳೆಯಲು ಅಧೀನ ಜನಾಂಗಗಳು ಭಯೋತ್ಪಾದನೆಯ ಮಾರ್ಗವನ್ನು ಅವಲಂಬಿಸಿದುವು. ಈ ವಿಧಾನದಲ್ಲಿ ನಿರಪರಾಧಿಗಳ ಹತ್ಯೆ, ವಿಮಾನಗಳ ಅಪಹರಣ, ರಾಯಭಾರಿಗಳ ಹತ್ಯೆ, ಒತ್ತೆಸೆರೆಯಿರಿಸುವುದು ಇತ್ಯಾದಿ ಸೇರಿದೆ. ಇಸ್ಲಾಮ್ ಈ ಎಲ್ಲ ವಿಧಾನಗಳನ್ನು ಅನ್ಯಾಯ ಮತ್ತು ಅಕ್ರಮವೆಂದು ಸಾರಿದೆ.

ರಾಯಭಾರಿಗಳನ್ನು ಕೊಲ್ಲುವುದನ್ನು ಒಂದು ಪ್ರವಾದಿ ವಚನದ ಮೂಲಕ ನಿಷೇಧಿಸಲಾಗಿದೆ:

ಪ್ರವಾದಿ(ಸ) ಅವರು ಓರ್ವ ರಾಯಭಾರಿಯಲ್ಲಿ ಹೇಳಿದರು- ರಾಯಭಾರಿಯನ್ನು ಕೊಲ್ಲುವುದು ಧರ್ಮಸಮ್ಮತವಾಗಿದ್ದರೆ ನಿನ್ನನ್ನು ಕೊಂದು ಬಿಡುತ್ತಿದ್ದೆ.

ಇಸ್ಲಾಮೀ ಕರ್ಮಶಾಸ್ತ್ರದ ವಿಧಿಯಂತೆ ರಾಯಭಾರಿ ಯುದ್ಧದ ವೇಳೆಯಲ್ಲಿ ಬಂದಿದ್ದರೂ ಆತನಿಗೆ ರಕ್ಷಣೆ ಒದಗಿಸಬೇಕಾದುದು ಇಸ್ಲಾಮೀ ಸರಕಾರದ ಕರ್ತವ್ಯವಾಗಿದೆ.

(ಝಾದುಲ್ ಮಆದ್)

ವಿಮಾನಗಳನ್ನು ಅಪಹರಿಸುವುದು, ಜನರನ್ನು ಒತ್ತೆಸೆರೆ ಇರಿಸುವುದು, ಇವೆರಡೂ ಚಿತ್ರ ಹಿಂಸೆ ಕೊಟ್ಟು ಕೊಲ್ಲುವುದಕ್ಕೆ ಸಮಾನವಾಗಿದೆ. ಚಿತ್ರಹಿಂಸೆ ಕೊಟ್ಟು ಕೊಲ್ಲುವುದನ್ನು ಇಸ್ಲಾಮ್ ನಿಷೇಧಿಸಿದೆ. ಒಂದು ಹದೀಸ್‌ನಲ್ಲಿ ಹೀಗಿದೆ:

ಪ್ರವಾದಿ(ಸ) ಅವರು ಚಿತ್ರಹಿಂಸೆ ಕೊಟ್ಟು ಕೊಲ್ಲುವುದನ್ನು ನಿಷೇಧಿಸಿರುವರು.

(ಅಬೂದಾವೂದ್)

ಇಸ್ಲಾಮಿನ ಆಗಮನಕ್ಕಿಂತ ಮುಂಚೆ ಅರೇಬಿಯಾದಲ್ಲಿ ಚಿತ್ರಹಿಂಸೆ ಕೊಟ್ಟು ಕೊಲ್ಲುವ ಪದ್ಧತಿ ಚಾಲ್ತಿಯಲ್ಲಿತ್ತು. ಕೆಲವು ಜನಾಂಗಗಳಲ್ಲಿ ಅನೇಕ ಶತಮಾನಗಳಿಂದ ಆ ಪದ್ಧತಿ ಜಾರಿಯಲ್ಲಿತ್ತು. ಇಸ್ಲಾಮ್ ಅದನ್ನು ಹದಿನಾಲ್ಕು ಶತಮಾನಗಳ ಹಿಂದೆಯೇ ನಿಷೇಧಿಸಿದೆ. ಎಲ್ಲಿಯವರೆಗೆಂದರೆ ಯಾವುದೇ ಪ್ರಾಣಿಗೂ ಚಿತ್ರಹಿಂಸೆ ಕೊಡುವುದನ್ನು ನಿಷೇಧಿಸಲಾಗಿದೆ.

ಒತ್ತೆಸೆರೆ ಮತ್ತು ವಂಶನಾಶದಂತಹ ಕೃತ್ಯಗಳು ಇದೇ ವರ್ಗಕ್ಕೆ ಸೇರುತ್ತವೆ. ಇಸ್ಲಾಮಿನಲ್ಲಿ ಯುದ್ಧವು ನಿಯಮ ರಹಿತವಲ್ಲ. ಇಸ್ಲಾಮ್‌ನಲ್ಲಿ ಯುದ್ಧಕ್ಕೆ ವಿಶಿಷ್ಟ ನಿಯಮಗಳಿವೆ. ಯಾರು, ಯಾವಾಗ, ಎಲ್ಲಿ, ಯಾರ ವಿರುದ್ಧ ಬೇಕಾದರೂ ಯುದ್ಧ ಹೂಡು ವಂತಿಲ್ಲ. ಒಂದು ಇಸ್ಲಾಮೀ ಸರಕಾರದ ಅಧಿಕೃತ ನಾಯಕ ಮಾತ್ರ ಯುದ್ಧದ ತೀರ್ಮಾನ ಮಾಡಬಹುದು. ಯುದ್ಧ ತಮ್ಮ ಮೇಲೆ ಹೇರಲ್ಪಟ್ಟಾಗ ಅಥವಾ ಅದು ಇಸ್ಲಾಮಿನ ಹಿತಾಸಕ್ತಿಯ ದೃಷ್ಟಿಯಿಂದ ಅನಿವಾರ್ಯವಾದಾಗ ಮಾತ್ರ ಯುದ್ಧ ಹೂಡಬಹುದಾಗಿದೆ.

ಒಪ್ಪಂದ ಬದ್ಧವಾದ ಒಂದು ರಾಷ್ಟ್ರದೊಂದಿಗೆ ಆ ಒಪ್ಪಂದವನ್ನು ಮುರಿಯುವ ಘೋಷಣೆ ಮಾಡದೆ ಯುದ್ಧ ಹೂಡಲಾಗದು. ಒಂದು ವೇಳೆ ಯಾರಾದರೂ ಒಪ್ಪಂದ ಬದ್ಧ ರಾಷ್ಟ್ರದ ಪ್ರಜೆಯನ್ನು ಕೊಂದರೆ ಅದರ ವಿಧಿಯನ್ನು ಅಲ್ಲಾಹನು ಹೀಗೆ ವಿವರಿಸುತ್ತಾನೆ-

"ಕೊಲೆಗೀಡಾದವನು ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡ ಮುಸ್ಲಿಮೇತರ ಜನಾಂಗದ ವ್ಯಕ್ತಿಯಾಗಿದ್ದರೆ ಅವನ ವಾರೀಸುದಾರರಿಗೆ ಪರಿಹಾರ ಧನವನ್ನು ಕೊಡಲಾಗು ವುದು ಮತ್ತು ಒಬ್ಬ ಸತ್ಯವಿಶ್ವಾಸಿ ಗುಲಾಮನನ್ನು ದಾಸ್ಯ ವಿಮೋಚನೆಗೊಳಿಸ ಬೇಕಾಗುವುದು." (ಪವಿತ್ರ ಕುರ್‌ಆನ್, 4:92)

ಒಪ್ಪಂದ ಬದ್ಧ ವ್ಯಕ್ತಿಯ ಕೊಲೆಗೆ ಪರಿಹಾರ ಧನ ಕಡ್ಡಾಯವಾಗಿದೆ ಮತ್ತು ಓರ್ವ ಮುಸ್ಲಿಮ್ ಗುಲಾಮನನ್ನು ಸ್ವತಂತ್ರಗೊಳಿಸುವುದು ಕೂಡಾ ಕಡ್ಡಾಯವಾಗಿದೆ.

ಯುದ್ಧ ಕಾಲದಲ್ಲಿ ಯಾರ ಪ್ರಾಣ ಹರಣವು ಧರ್ಮಸಮ್ಮತವಾಗುತ್ತದೆಯೋ ಅದೇ ಸೈನಿಕನ ಜೀವವು ಶಾಂತಿಯ ಒಪ್ಪಂದ ಆದ ಕೂಡಲೇ ಪವಿತ್ರವಾಗಿ ಬಿಡುತ್ತದೆ. ಆಗ ಆಡಳಿತಗಾರನು ಬಯಸಿದರೂ ಆ ವ್ಯಕ್ತಿಯನ್ನು ಕೊಲ್ಲುವುದು ಧರ್ಮಸಮ್ಮತವಲ್ಲ.

ಇದು ಯುದ್ಧದ ಪರಿಸ್ಥಿತಿಯಾಯಿತು. ಇನ್ನು ಇಸ್ಲಾಮ್ ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಆತ್ಮ ರಕ್ಷಣೆಯ ವೈಯಕ್ತಿಕ ಹಕ್ಕನ್ನು ನೀಡಿದೆ. ಅದು ಕೂಡಾ ಯುದ್ಧದ ಒಂದು ವಿಧವಾಗಿದೆ. ಒಬ್ಬ ವ್ಯಕ್ತಿಯ ವಿರುದ್ಧ ಇನ್ನೊಬ್ಬ ವ್ಯಕ್ತಿ ಅಥವಾ ಒಂದು ಗುಂಪು ಆಕ್ರಮಣ ಮಾಡಿದರೆ ಆ ವ್ಯಕ್ತಿಗೆ ತನ್ನ ಪ್ರಾಣ, ಸೊತ್ತು, ಮಾನ-ಮರ್ಯಾದೆಗಳ ರಕ್ಷಣೆಯ ಹಕ್ಕಿದೆ. ಈ ಹಕ್ಕನ್ನು ಆತ ತೊರೆಯಲೂ ಬಹುದು. ಆದರೆ ಈ ಹಕ್ಕು ಒಬ್ಬ ವ್ಯಕ್ತಿ ಆಕ್ರಮಣಕ್ಕೆ ಗುರಿಯಾದಾಗ ಮಾತ್ರ ಲಭಿಸುತ್ತದೆ ಮತ್ತು ತನ್ನ ಆತ್ಮರಕ್ಷಣೆಗೆ ಅಗತ್ಯವಿದ್ದಷ್ಟು ಮಾತ್ರ ಹಿಂಸೆಯ ಅನುಮತಿ ಆತನಿಗಿರುತ್ತದೆ. ಈ ಆತ್ಮರಕ್ಷಣೆಯ ದಾಳಿಯಲ್ಲಿ ಆಕ್ರಮಣಕಾರಿಯು ಸತ್ತರೂ ಅದು ಧರ್ಮ ಸಮ್ಮತವಾಗಿದೆ. ಅಕ್ರಮಿಯು ದಾಳಿ ಮಾಡಿದಾಗ ಮಾತ್ರ ರಕ್ಷಣೆಯ ಹಕ್ಕಿರುತ್ತದೆ. ಅವನು ಆಕ್ರಮಣದಿಂದ ಹಿಂಜರಿದರೆ ಅಥವಾ ಮೂರನೆಯ ವ್ಯಕ್ತಿಯೊಬ್ಬ ಆತನನ್ನು ಆಕ್ರಮಣದಿಂದ ತಡೆದರೆ ಅವನ ಆತ್ಮರಕ್ಷಣೆಯ ಹಕ್ಕು ಅನೂರ್ಜಿತಗೊಳ್ಳುತ್ತದೆ.

ಮೇಲಿನ ವಿವರಣೆಗಳಿಂದ ತಿಳಿದು ಬರುವುದೇನೆಂದರೆ ಕೊಲೆಯು ಕೇವಲ ಯುದ್ಧ ಅಥವಾ ಯುದ್ಧನಿರತ ಜನಾಂಗದೊಂದಿಗೆ ಸಂಬಂಧಿಸಿದೆ ಅಥವಾ ಅದು ರಕ್ಷಣಾತ್ಮಕವಾಗಿ ಧರ್ಮಸಮ್ಮತವಾಗಿದೆ. ಕೊಲೆಯಾದ ವ್ಯಕ್ತಿ ಯುದ್ಧ ನಿರತನಾಗಿರಬೇಕು (Bellegerent). ಹಾಗಲ್ಲದಿದ್ದರೆ ಅವನನ್ನು ಕೊಲೆ ಮಾಡುವುದು ಧರ್ಮಸಮ್ಮತವಲ್ಲ.

ಪ್ರವಾದಿ(ಸ) ಸ್ತ್ರೀಯರ ಮತ್ತು ಮಕ್ಕಳ ಕೊಲೆಯನ್ನು ನಿಷೇಧಿಸಿರುವರು.

**(ಬುಖಾರಿ, ಕಿತಾಬುಲ್ ಜಿಹಾದ್)**

ವೃದ್ಧರನ್ನು, ಚಿಕ್ಕ ಮಕ್ಕಳನ್ನು ಮತ್ತು ಸ್ತ್ರೀಯರನ್ನು ಕೊಲ್ಲಬೇಡಿರಿ.

**(ಅಬೂದಾವೂದ್)**

ಯುದ್ಧದ ಸ್ಥಿತಿಯಲ್ಲೂ ಯುದ್ಧ ನಿರತರಲ್ಲದವರನ್ನು ಕೊಲ್ಲಬಾರದು. ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

ಅದೇ ರೀತಿ ಯುದ್ಧದಿಂದ ಜಿಗುಪ್ಸೆ ಹೊಂದಿ ನಿಮ್ಮ ಬಳಿಗೆ ಬರುವ, ನಿಮ್ಮ ವಿರುದ್ಧವಾಗಲಿ ತಮ್ಮ ಜನಾಂಗದ ವಿರುದ್ಧವಾಗಲಿ ಯುದ್ಧ ಮಾಡಲು ಇಚ್ಛಿಸದಂತಹ ಕಪಟ ವಿಶ್ವಾಸಿಗಳೂ (ಈ ಆದೇಶದಿಂದ) ಹೊರತಾಗಿದ್ದಾರೆ. ಅಲ್ಲಾಹನು ಇಚ್ಛಿಸುತ್ತಿದ್ದರೆ ಅವರನ್ನು ನಿಮ್ಮ ಮೇಲೆ ಎರಗಿಸುತ್ತಿದ್ದನು ಮತ್ತು ಅವರೂ ನಿಮ್ಮ ವಿರುದ್ಧ ಹೋರಾಡುತ್ತಿದ್ದರು. ಆದುದರಿಂದ ಅವರು ನಿಮ್ಮ ವಿರುದ್ಧ ಯುದ್ಧ ಮಾಡದೆ ದೂರ ಉಳಿದು ಬಿಡುವುದಾದರೆ ಮತ್ತು ನಿಮ್ಮೆದುರು ಸಂಧಿ-ಸಮಾಧಾನಗಳ ಹಸ್ತ ಚಾಚಿದರೆ ಅಲ್ಲಾಹನು ನಿಮಗೆ ಅವರ ಮೇಲೆ ಕೈ ಮಾಡುವ ಯಾವ ಮಾರ್ಗವನ್ನೂ ಇರಿಸಿರುವುದಿಲ್ಲ. **(4:90)**

ನಿಷ್ಪಕ್ಷಪಾತಿಗಳು ಮತ್ತು ಯುದ್ಧದೊಂದಿಗೆ ಸಂಬಂಧ ಇಲ್ಲದವರನ್ನು ದಾಳಿಗೆ ಗುರಿಪಡಿಸುವುದು ಇಸ್ಲಾಮಿನಲ್ಲಿ ಧರ್ಮಸಮ್ಮತವಲ್ಲವೆಂದು ಈ ವಿವರಣೆಗಳಿಂದ ವ್ಯಕ್ತವಾಯಿತು.

ಭಯೋತ್ಪಾದನೆಯ ಇನ್ನೂ ಕೆಲವು ವಿಧಾನಗಳು ಇಂದಿನ ಯುಗದಲ್ಲಿ ಚಾಲ್ತಿಯಲ್ಲಿವೆ. ಅವುಗಳಲ್ಲಿ ಕೆಲವಕ್ಕೆ ಮಾತ್ರ ಹಿಂದಿನ ಕಾಲದಲ್ಲಿ ನಿದರ್ಶನ ಸಿಗುತ್ತದೆ. ಉದಾ: ಕೊಳ್ಳಿಯಿಡುವುದು, ದರೋಡೆ ಮಾಡುವುದು, ಸಾರ್ವತ್ರಿಕ ಕೊಲೆ, ಬಾಂಬ್ ಸ್ಫೋಟದ ಮೂಲಕ ವಿನಾಶ ಹರಡುವುದು, ಕಸ್ಟಡಿ ಸಾವುಗಳು, ಮೃತದೇಹಗಳನ್ನು ಅವಮಾನಿಸುವುದು, ಸೋತವರೊಂದಿಗೆ ಕ್ರೂರವಾಗಿ ವರ್ತಿಸುವುದು, ವಂಶ ನಿರ್ಮೂಲನ, ಧಾರ್ಮಿಕ ನಾಯಕರ ಅವಹೇಳನ ಇತ್ಯಾದಿ. ಈ ಎಲ್ಲ ವಿಷಯಗಳನ್ನು ಇಸ್ಲಾಮ್ ನಿಷೇಧಿಸಿದೆ.

## ಕೊಳ್ಳಿಯಿಡುವುದು

ಇಸ್ಲಾಮ್ ಕೊಳ್ಳಿಯಿಡುವುದಕ್ಕೆ ಎಂದಿಗೂ ಅನುಮತಿ ನೀಡುವುದಿಲ್ಲ. ಸಮಾಜದಲ್ಲಿ ಬೆಂಕಿ ಹಚ್ಚುವ ಘಟನೆಗಳು ಇಸ್ಲಾಮೀ ಶರೀಅತ್‌ಗೆ ವಿರುದ್ಧವಾಗಿದೆ. ಇದು ಕ್ಷೋಭೆ ಹರಡುವ ಸಾಧನವಾಗಿದೆ. ಯಾರನ್ನೂ ಬೆಂಕಿಯ ಮೂಲಕ ಕೊಲ್ಲುವುದು ಧರ್ಮ ಸಮ್ಮತವಲ್ಲ. 'ಸುಟ್ಟು ಕೊಲ್ಲುವ ಅಧಿಕಾರ ಅಲ್ಲಾಹನ ಹೊರತು ಯಾರಿಗೂ ಇಲ್ಲ' ಎಂದು ಹದೀಸ್‌ನಲ್ಲಿದೆ (ಅಬೂದಾವೂದ್) ಈ ಹದೀಸ್ ಯುದ್ಧದ ಸ್ಥಿತಿಯ ಕುರಿತಾಗಿದೆ. ಯುದ್ಧದಲ್ಲೇ ಬೆಂಕಿ ಹಚ್ಚುವುದು ನಿಷಿದ್ಧವಾಗಿರುವಾಗ ಸಾಮಾನ್ಯ ಸ್ಥಿತಿಯಲ್ಲಿ ಈ ಕೃತ್ಯವು ಇನ್ನಷ್ಟು ಖಂಡನೀಯವಾಗಿದೆ ಎಂಬುದು ವ್ಯಕ್ತ.

## ದರೋಡೆ

ದರೋಡೆ ಮಾಡುವುದು ಕೂಡಾ ಇಸ್ಲಾಮೀ ಶರೀಅತ್‌ನಲ್ಲಿ ನಿಷಿದ್ಧವಾಗಿದೆ. ಇದು ಯುದ್ಧದ ವೇಳೆಯೂ ಧರ್ಮಸಮ್ಮತವಲ್ಲ. ಸಾಮಾನ್ಯ ಸ್ಥಿತಿಯಲ್ಲಿ ಅದು ಮತ್ತಷ್ಟು ಖಂಡನೀಯವಾಗುತ್ತದೆ. ಒಮ್ಮೆ ಕೆಲವು ಮುಸ್ಲಿಮರು ಯಹೂದಿಯರಿಂದ ಆಹಾರ ವಸ್ತುಗಳನ್ನು ದೋಚಿದರು. ಪ್ರವಾದಿಯವರಿಗೆ(ಸ) ಇದರ ಸುದ್ದಿ ಸಿಕ್ಕಿತು. ಅವರು ಬಹಳ ಕುಪಿತರಾದರು ಮತ್ತು ಅಂತಹ ಕೃತ್ಯಗಳನ್ನು ನಿಷೇಧಿಸಿದರು. ಒಂದು ಯುದ್ಧದ ವೇಳೆ ಮುಸ್ಲಿಮರು ಕೆಲವು ಆಡುಗಳನ್ನು ಅವುಗಳ ಒಡೆಯರ ಅನುಮತಿಯಿಲ್ಲದೆ ಕೊಯ್ದರು. ಪ್ರವಾದಿಯವರು(ಸ) ವಿಷಯ ತಿಳಿದಾಗ ಕೆರಳಿದರು ಮತ್ತು ಇಡೀ ಮಾಂಸವನ್ನು ನೆಲಕ್ಕೆಸೆದರು. (ಬುಖಾರಿ) ಇಂತಹ ಇನ್ನೂ ಕೆಲವು ಹದೀಸ್‌ಗಳಿವೆ. ಅವುಗಳಿಂದ ಲೂಟಿ-ದರೋಡೆಗಳು ಇಸ್ಲಾಮಿಗೆ ವಿರುದ್ಧವಾಗಿದೆಯೆಂದು ತಿಳಿದು ಬರುತ್ತದೆ. (ಅಬೂದಾವೂದ್) ಇಸ್ಲಾಮೀ ಕರ್ಮಶಾಸ್ತ್ರದಲ್ಲೂ ಅವುಗಳನ್ನು ಕಠಿಣವಾಗಿ ನಿಷೇಧಿಸಿದ ವಿಧಿಗಳಿವೆ.

## ಕಸ್ಟಡಿ ಸಾವುಗಳು

ಬಂಧನದಲ್ಲಿರುವಾಗ ಆಗುವ ಸಾವನ್ನು (Custodial death) ಇಸ್ಲಾಮ್ ನಿಷೇಧಿಸುತ್ತದೆ. ಕೈದಿಗಳಿಗೆ ಉಣಬಡಿಸುವುದು ಅಲ್ಲಾಹನ ಸಂಪ್ರೀತಿಯ ಹಾದಿಯೆಂದು ಪವಿತ್ರ ಕುರ್‌ಆನ್‌ನಲ್ಲಿ ಹೇಳಲಾಗಿದೆ. ಸತ್ಯವಿಶ್ವಾಸಿಗಳ ಗುಣಗಳನ್ನು ವಿವರಿಸುತ್ತಾ ಅದು ಹೀಗೆ ಹೇಳುತ್ತದೆ:

"ಅವರು ಅಲ್ಲಾಹನ ಮೇಲಿನ ಪ್ರೀತಿಯಿಂದ ದರಿದ್ರರಿಗೂ ಅನಾಥರಿಗೂ ಸೆರೆಯಾಳುಗಳಿಗೂ ಊಟ ಕೊಡುತ್ತಾರೆ." (76:8)

ಉಮವಿ ಖಿಲಾಫತ್‌ನ ಕಾಲದಲ್ಲಿ ಇರಾಕ್‌ನ ಓರ್ವ ಪ್ರಖ್ಯಾತ ರಾಜ್ಯಪಾಲ ಹಜ್ಜಾಜ್ ಬಿನ್ ಯೂಸುಫ್ ಒಮ್ಮೆ ಪ್ರಸಿದ್ಧ ಸಹಾಬಿ (ಪ್ರವಾದಿ ಸಂಗಾತಿ) ಅಬ್ದುಲ್ಲಾ ಬಿನ್ ಉಮರ್‌ರವರಿಗೆ(ರ) ಓರ್ವ ಬಂಧನದಲ್ಲಿರುವ ವ್ಯಕ್ತಿಯನ್ನು ಕೊಲ್ಲುವಂತೆ ಆದೇಶಿಸುತ್ತಾರೆ, ಆಗ ಇಬ್ನು ಉಮರ್ ಹೇಳುತ್ತಾರೆ:

ನಮಗೆ ಇದನ್ನು ಆಜ್ಞಾಪಿಸಲಾಗಿಲ್ಲ. ಅಲ್ಲಾಹನ ಆದೇಶ ಹೀಗಿದೆ- ಯುದ್ಧವು ತನ್ನ ಆಯುಧವನ್ನು ಕೆಳಗಿರಿಸಿದಾಗ ಸೆರೆಯಾಳುಗಳನ್ನು ಕಟ್ಟಿ ಹಾಕುವುದು ಅನಂತರ ಒಂದೋ ಅವರ ಮೇಲೆ ಸೌಜನ್ಯ ತೋರಿಸುವುದು ಅಥವಾ ಪರಿಹಾರ ಧನ ಪಡೆದು ಬಿಟ್ಟು ಬಿಡುವುದು.

ಸೆರೆಯಾಳುಗಳೊಂದಿಗೆ ಸದ್ವರ್ತನೆಯ ಕುರಿತು ಒಂದು ಪ್ರವಾದಿ ವಚನ ಹೀಗಿದೆ: "ಸೆರೆಯಾಳುಗಳೊಂದಿಗೆ ಉತ್ತಮವಾಗಿ ವ್ಯವಹರಿಸಿರಿ."

ಇಸ್ಲಾಮಿನ ಈ ವಿಧಿಗಳು ಹೆಚ್ಚಾಗಿ ಯುದ್ಧದ ಕೈದಿಗಳ ಕುರಿತಾಗಿದೆ. ಯುದ್ಧೇತರ ಕೈದಿಗಳ ಜತೆ ಸದ್ವರ್ತನೆ ಇನ್ನಷ್ಟು ಅಗತ್ಯವಾಗಿದೆ. ಸಾಮಾನ್ಯ ಆರೋಪಿಯು ಕಾನೂನಿನ ಅಧೀನವಿರುವ ವಿಶ್ವಸ್ಥನಿಧಿಯಾಗಿರುತ್ತಾನೆ. ಕಾನೂನಿಗೆ ಆತನನ್ನು ಶಿಕ್ಷಿಸುವ ಅಥವಾ ಬಿಟ್ಟು ಬಿಡುವ ಅಧಿಕಾರವಿದೆ. ಪೊಲೀಸ್ ಅಥವಾ ಸರಕಾರದ ಅಧೀನದಲ್ಲಿ ಅವರನ್ನು ವಿಶ್ವಸ್ಥ ನಿಧಿಯ(Trust) ರೂಪದಲ್ಲಿ ಕೊಡಲಾಗುತ್ತದೆ. ಅವರ ರಕ್ಷಣೆ ಸರಕಾರದ ಹೊಣೆಗಾರಿಕೆಯಾಗಿದೆ.

## ಕ್ರೂರ ವರ್ತನೆ

ಕ್ರೂರ ವರ್ತನೆಯೂ ಭಯೋತ್ಪಾದನೆಯ ಸಾಲಿಗೆ ಸೇರುತ್ತದೆ. ಅದು ಯುದ್ಧ ನಿರತ ಜನಾಂಗದ ವಿರುದ್ಧವಾಗಿರಲಿ ಅಥವಾ ಶಾಂತಿಯುತ ಪ್ರಜೆಗಳ ವಿರುದ್ಧವಾಗಿರಲಿ. ಕ್ರೂರವಾಗಿ ವರ್ತಿಸುವುದೆಂದರೆ ಗಲಭೆ ಎಬ್ಬಿಸಿ ಶಾಂತಿಯನ್ನು ಕದಡುವುದಾಗಿದೆ. ಬೆಳೆಗಳನ್ನು ನಾಶ ಮಾಡುವುದು, ವಂಶ ನಿರ್ಮೂಲನ ಮಾಡುವುದು, ನಿರಪರಾಧಿಗಳ ರಕ್ತವನ್ನು ಹರಿಸುವುದು, ಫಲವುಳ್ಳ ವೃಕ್ಷಗಳನ್ನು ಕಡಿಯುವುದು, ಆರಾಧನಾಲಯ ಗಳನ್ನು ಧ್ವಂಸ ಮಾಡುವುದು ಇತ್ಯಾದಿ. ಪವಿತ್ರ ಕುರ್‌ಆನ್ ಕ್ರೂರ ವರ್ತನೆಯ ಎಲ್ಲ ವಿಧಗಳನ್ನೂ ನಿಷೇಧಿಸಿದೆ-

"ಅಂತಹವನಿಗೆ ಅಧಿಕಾರ ಪ್ರಾಪ್ತವಾದಾಗ ಭೂಮಿಯ ಮೇಲೆ ಅವನ ಚಟುವಟಿಕೆ ಗಳೆಲ್ಲ ಕ್ಷೋಭೆಯನ್ನುಂಟು ಮಾಡಲಿಕ್ಕೂ ಹೊಲ-ಬೆಳೆಗಳನ್ನು ಹಾಳು ಮಾಡಲಿಕ್ಕೂ ಮಾನವ ವಂಶವನ್ನು ನಾಶ ಮಾಡಲಿಕ್ಕೂ ಆಗಿರುತ್ತದೆ. ವಾಸ್ತವದಲ್ಲಿ (ಅವನು ಸಾಕ್ಷ್ಯವಿರಿಸುತ್ತಿರುವ) ಅಲ್ಲಾಹನು ಕ್ಷೋಭೆಯನ್ನು ಎಷ್ಟು ಮಾತ್ರಕ್ಕೂ ಮೆಚ್ಚುವುದಿಲ್ಲ." (2:205)

ಬೆಳೆಗಳನ್ನು ಕಡಿಯುವುದರಿಂದ, ಆರಾಧನಾಲಯಗಳನ್ನು ಕೆಡಹುವುದರಿಂದ, ಜಾನುವಾರುಗಳನ್ನು ಕೊಲ್ಲುವುದರಿಂದ, ಫಲವುಳ್ಳ ವೃಕ್ಷಗಳನ್ನು ಕಡಿಯುವುದರಿಂದ ಮುಸ್ಲಿಮರನ್ನು ತಡೆಯಲಾಗಿದೆ. ಇದು ಯುದ್ಧದ ಸ್ಥಿತಿಯ ಆದೇಶವಾಗಿದೆ. ಶಾಂತಿಯ ಸ್ಥಿತಿಯಲ್ಲಿ ಕ್ಷೋಭೆಯನ್ನು ಹರಡುವುದು ಅಪರಾಧಗಳ ಪಟ್ಟಿಯಲ್ಲಿ ಅತ್ಯಧಿಕ ನೀಚ ಅಪರಾಧವಾಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ:

"ಕ್ಷೋಭೆ ರಕ್ತಪಾತಕ್ಕಿಂತಲೂ ಮಹತ್ತರ ಅಪರಾಧವಾಗಿರುತ್ತದೆ." (2:217)

## ಮೃತದೇಹಗಳನ್ನು ಅವಮಾನಿಸುವುದು

ಇಸ್ಲಾಮಿನಲ್ಲಿ ಜೀವಹರಣ ಮಾಡುವುದು ಒಂದು ಅಪರಾಧವಾಗಿದೆ. ಆದರೆ ಯುದ್ಧದಲ್ಲಿ ಪ್ರಾಣಹರಣವು ಒಂದು ಅನಿವಾರ್ಯತೆಯಾಗಿದೆ. ಆದ್ದರಿಂದ ಅದಕ್ಕೆ ಅನುಮತಿಯಿದೆ. ವಿಜಯದ ಮದವೇರಿದವರು ಸಾಮಾನ್ಯವಾಗಿ ಮಾನವೀಯ ಮೇರೆಗಳನ್ನು ಮೀರುತ್ತಾರೆ. ರಣರಂಗದ ಮೃತದೇಹಗಳನ್ನೂ ಅವರು ಬಿಡುವುದಿಲ್ಲ. ಮೃತ ದೇಹಗಳ ಅವಹೇಳನ ಮಾಡಬಾರದೆಂದು ಇಸ್ಲಾಮ್ ಆದೇಶಿಸಿದೆ. ಒಂದು ಪ್ರವಾದಿ ವಚನ ಹೀಗಿದೆ:

ಮೃತ ದೇಹಗಳ ಅವಮಾನಿಸದಿರಿ ಮತ್ತು ಮಕ್ಕಳನ್ನು ಕೊಲ್ಲದಿರಿ. (ತಿರ್ಮಿದಿ)

## ಒತ್ತೆಸೆರೆ

ಒಬ್ಬನನ್ನು ವಂಚನೆಯಿಂದ ಅಥವಾ ಶಕ್ತಿಯಿಂದ ತಮ್ಮ ವಶಕ್ಕೆ ತೆಗೆದು ಕೊಳ್ಳುವುದನ್ನು ಒತ್ತೆಸೆರೆ ಎನ್ನಲಾಗುತ್ತದೆ. ಇಸ್ಲಾಮಿನ ದೃಷ್ಟಿಯಲ್ಲಿ ಈ ಕೃತ್ಯ ಅಪರಾಧವಾಗಿದೆ. ಯಾರದೇ ಸ್ವಾತಂತ್ರ್ಯವನ್ನು ಹರಣ ಮಾಡಲು ಯಾರಿಗೂ ಅಧಿಕಾರವಿಲ್ಲ. ಮೂಲಭೂತವಾಗಿ ಇದು ಕೂಡಾ ಒಂದು ರೀತಿಯ ದರೋಡೆಯಾಗಿದೆ. ದರೋಡೆಯಲ್ಲಿ ದರೋಡೆಕೋರನು ಇತರರ ಸೊತ್ತನ್ನು ಲೂಟಿ ಮಾಡುತ್ತಾನೆ. ಒತ್ತೆಸೆರೆಯಲ್ಲಿ ಇನ್ನೊಬ್ಬನ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗುತ್ತದೆ.

ಇಂದು ಅನೇಕ ಧರ್ಮಸಮ್ಮತ ಧ್ಯೇಯಗಳ ಹೆಸರಲ್ಲೂ ಒತ್ತೆಸೆರೆಯ ಘಟನೆಗಳು ನಡೆಯುತ್ತಿರುತ್ತವೆ. ಆದ್ದರಿಂದ ಪ್ರಖ್ಯಾತ ಇಸ್ಲಾಮೀ ವಿದ್ವಾಂಸರಾದ ಯೂಸುಫುಲ್ ಕರ್ಝಾವಿಯವರು ಒತ್ತೆಸೆರೆಯು ಎಷ್ಟೇ ದೊಡ್ಡ ಪುಣ್ಯ ಕಾರ್ಯಕ್ಕಾಗಿ ಮಾಡಿದ್ದರೂ ಅದು ನಿಷಿದ್ಧವಾಗಿದೆ ಎಂದು ಹೇಳಿರುವರು.

## ಜಿಹಾದ್ ಮತ್ತು ಭಯೋತ್ಪಾದನೆಯ ವ್ಯತ್ಯಾಸ

ಜಿಹಾದ್ ಮತ್ತು ಭಯೋತ್ಪಾದನೆ ವಾಸ್ತವದಲ್ಲಿ ಎರಡು ತದ್ವಿರುದ್ಧ ವಸ್ತುಗಳಾಗಿವೆ. ಅವುಗಳ ಮಧ್ಯೆ ಭೂಮಿ-ಆಕಾಶಗಳಷ್ಟು ವ್ಯತ್ಯಾಸವಿದೆ. ಒಂದು ಮಾನವ ಪ್ರಾಣದ ಗೌರವ, ಶಾಂತಿ-ಸಮಾಧಾನದ ಸ್ಥಾಪನೆ, ಅನ್ಯಾಯವನ್ನು ಸದೆಬಡಿಯುವುದು ಹಾಗೂ ಸತ್ಯದ ಬೆಂಬಲ ಮತ್ತು ಸಂರಕ್ಷಣೆಗಾಗಿ ಅಸ್ತಿತ್ವಕ್ಕೆ ಬರುತ್ತದೆ. ಇನ್ನೊಂದು ಕ್ಷೋಭೆ-ಗಲಭೆ, ದ್ವೇಷ, ಪ್ರತೀಕಾರ, ಭ್ರಷ್ಟಾಚಾರ, ಅರಾಜಕತೆ ಹಾಗೂ ನಿರಪರಾಧಿಗಳ

ಹತ್ಯೆಯ ಒಂದು ಹುಚ್ಚು ಅಪರಾಧಿ ಕೃತ್ಯವಾಗಿದೆ. ಆದರೆ ಪಾಶ್ಚಾತ್ಯ ಮತ್ತು ಪೌರ್ವಾತ್ಯ ರಾಷ್ಟ್ರಗಳ ಕೆಲವು ಬರಹಗಾರರು ಎರಡನ್ನು ಒಂದೇ ಎಂದು ಸಾರಿ ಇಸ್ಲಾಮ್ ಮತ್ತು ಮುಸ್ಲಿಮರ ಮುಖವನ್ನು ವಿರೂಪಗೊಳಿಸಲು ಪ್ರಯತ್ನಿಸುತ್ತಿದ್ದಾರೆ.

ಜಿಹಾದ್‌ಗೆ ವಸ್ತುತಃ ಇಸ್ಲಾಮಿನಲ್ಲಿ ಮೂಲಭೂತ ಸ್ಥಾನಮಾನವಿದೆ ಮತ್ತು ಅದು ವ್ಯಕ್ತಿತ್ವದ ಪರಿಪೂರ್ಣತೆಯ ಮಾಧ್ಯಮವಾಗಿದೆ. ತನ್ಮೂಲಕ ಸಮಸ್ತ ಮಾನವ ಕೋಟಿಯ ಸಂರಕ್ಷಣೆ ಮತ್ತು ಮಾನವ ಪ್ರಾಣದ ಪಾವಿತ್ರ್ಯವನ್ನು ಸ್ಥಾಪಿಸುವ ಜಾಗತಿಕ ಹೊಣೆಗಾರಿಕೆಯನ್ನು ಇಸ್ಲಾಮ್ ವಹಿಸಿಕೊಳ್ಳುತ್ತದೆ.

ವಿಷಾದದ ವಿಷಯವೇನೆಂದರೆ ಇಸ್ಲಾಮ್ ಒಂದು ರಕ್ತದಾಹಿ ಧರ್ಮವೆಂದೂ ಅದು ತನ್ನ ಅನುಯಾಯಿಗಳಿಗೆ ರಕ್ತಪಾತವನ್ನು ಕಲಿಸುತ್ತದೆಂದೂ ಯೂರೋಪ್ ಇಸ್ಲಾಮಿನ ಮೇಲೆ ಅಪವಾದ ಹೊರಿಸಿತು. ಈ ಅಪವಾದವು ಇಸ್ಲಾಮಿನ ಔನ್ನತ್ಯದ ಕಾಲ ಕಳೆದ ಬಹಳ ದಿನಗಳ ನಂತರ ಕೇಳಿ ಬಂತು. ಇಸ್ಲಾಮಿನ ಖಡ್ಗಕ್ಕೆ ತುಕ್ಕು ಹಿಡಿದ ನಂತರ ಈ ಕಾಲ್ಪನಿಕ ಅಪವಾದವನ್ನು ಅದರ ಮೇಲೆ ಹೇರಲಾಯಿತು. ಆದರೆ ಆಗ ಇಸ್ಲಾಮಿನ ಮೇಲೆ ಈ ಮಿಥ್ಯಾರೋಪ ಹೊರಿಸಿದ ಯುರೋಪ್‌ನ ಖಡ್ಗವು ನಿರಪರಾಧಿ ಜನರ ರಕ್ತದಿಂದ ಕೆಂಪಾಗುತ್ತಿತ್ತು. ಹೆಬ್ಬಾವು ಸಣ್ಣ ಹಾವುಗಳನ್ನು ನುಂಗುವಂತೆ ಅದು ಜಗತ್ತಿನ ದುರ್ಬಲ ಜನಾಂಗಗಳನ್ನು ನುಂಗುತ್ತಿತ್ತು.

ವಾಸ್ತವದಲ್ಲಿ ಮಾನವಕೋಟಿಗೆ ಆಕ್ರಮದಿಂದ ಮುಕ್ತಿ ದೊರಕಿಸಿ ಕೊಡಲಿಕ್ಕಾಗಿ ಇಸ್ಲಾಮ್ ಖಡ್ಗ ಎತ್ತುವ ವ್ಯವಸ್ಥೆ ಮಾಡಿತು.

ಪವಿತ್ರ ಕುರ್‌ಆನ್ ಇಸ್ಲಾಮಿನ ಮೂಲಾಧಾರ ಮತ್ತು ಅದರ ನೈಜ ಸ್ಫೂರ್ತಿಯಾಗಿದೆ. ಅದು ಅನೇಕ ಕಡೆಗಳಲ್ಲಿ ಮಾನವ ಪ್ರಾಣದ ಪಾವಿತ್ರ್ಯವನ್ನು ಸಾರಿ ಅದರ ರಕ್ಷಣೆಗೆ ಆದೇಶಿಸಿದೆ. ಇಸ್ಲಾಮಿನ ಈ ಬೋಧನೆಗಳ ಪರಿಣಾಮವಾಗಿ ಅರೇಬಿಯಾದಂತಹ ರಕ್ತದಾಹಿ ಜನಾಂಗವನ್ನು ಸಂಸ್ಕೃತಿ ಮತ್ತು ಸಭ್ಯತೆಯ ಉತ್ತುಂಗಕ್ಕೆ ಏರಿಸಲಾಯಿತು. ಇಸ್ಲಾಮಿನ ಶಿಕ್ಷಣದ ಪ್ರಕಾರ ಸ್ಥಾಪಿಸಲ್ಪಟ್ಟಂತಹ ಸಮಾಜದ ಅನುಗ್ರಹದಿಂದಾಗಿ ಆ ರಕ್ತದಾಹಿ ಅರಬರು ಶಾಂತಿ-ಸಮಾಧಾನ ಮತ್ತು ಮಾನವ ಪ್ರಾಣದ ಗೌರವದ ವಕ್ತಾರರಾಗಿ ಲೋಕದ ಮೂಲೆಮೂಲೆಗಳಲ್ಲಿ ಹರಡಿದರು. ಮೌ| ಸಯ್ಯದ್ ಮೌದೂದಿಯವರ ಮಾತಿನಲ್ಲಿ, "ಇಸ್ಲಾಮೀ ಶಿಕ್ಷಣವು ಮಾನವನ ಅನೇಕ ಕೆಡುಕು ಮತ್ತು ಪಥಭ್ರಷ್ಟತೆಗಳಂತೆ ಲೋಕದಲ್ಲಿ ವ್ಯಾಪಕವಾಗಿದ್ದಂತಹ ಮಾನವ ಪ್ರಾಣದ ಅಗೌರವವನ್ನು ಕೊನೆ ಗೊಳಿಸಿತು. ಇಸ್ಲಾಮ್ ಹೀಗೆ ಘೋಷಿಸಿತು- ಮಾನವ ಪ್ರಾಣವನ್ನು ಅಲ್ಲಾಹನು ಪವಿತ್ರವೆಂದು ಸಾರಿದ್ದಾನೆ. ಆದ್ದರಿಂದ ಸತ್ಯವು ಆ ಪ್ರಾಣವನ್ನು ಹರಣ ಮಾಡುವ ಬೇಡಿಕೆಯನ್ನು ಮುಂದಿಡದೆ ಅದನ್ನು ಹರಣ ಮಾಡಬೇಡಿರಿ ಎಂದಿತು. ಈ ಘೋಷಣೆಯಲ್ಲಿ ಒಂದು ಶಕ್ತಿಯಿತ್ತು. ಶಕ್ತಿಗುಣತೆಯೇ ಅದು 'ಅಹಿಂಸಾ ಪರಮೋಧರ್ಮ' ಎಂಬ ಕೂಗಿನಂತೆ ಬುದ್ಧಿ ಮತ್ತು ಪ್ರಕೃತಿಗೆ ನಿಲುಕದ ಘೋಷಣೆಯಾಗಿರಲಿಲ್ಲ. ಆದ್ದರಿಂದ ಅದು ಲೋಕದ ಮೂಲೆಮೂಲೆಗೆ ತಲುಪಿತು. ಅದು ಮನುಷ್ಯನಿಗೆ ಅವನ ಜೀವನದ ನೈಜ ಬೆಲೆಯ

ಪರಿಚಯ ಮಾಡಿಕೊಟ್ಟಿತು. ಸಾಮಾಜಿಕ ಇತಿಹಾಸದ ಯಾವನೇ ನ್ಯಾಯವಂತ ವಿದ್ವಾಂಸನು ಲೋಕದ ನೈತಿಕ ಕಾನೂನುಗಳಲ್ಲಿ ಮಾನವ ಜೀವನದ ಪಾವಿತ್ರ್ಯವನ್ನು ಸ್ಥಾಪಿಸುವ ಹೆಮ್ಮೆ ಈ ಘೋಷಣೆಗೆ ಪ್ರಾಪ್ತವಾದಂತೆ ಬೆಟ್ಟದ ಪ್ರವಚನ ಅಥವಾ 'ಅಹಿಂಸಾ ಪರಮೋಧರ್ಮ' ಎಂಬ ಘೋಷಣೆಗೆ ದೊರತಿಲ್ಲ ಎಂಬುದನ್ನು ನಿರಾಕರಿಸಲಾರ.

**(ಅಲ್ ಜಿಹಾದ್ ಫಿಲ್ ಇಸ್ಲಾಮ್: ಪು- 129)**

ಇಸ್ಲಾಮ್ ಮಾನವ ಪ್ರಾಣದ ಸಂರಕ್ಷಣೆ ಮತ್ತು ಪಾವಿತ್ರ್ಯದ ಕಾವಲುಗಾರನಾಗಿರುವುದರ ಜತೆಗೆ ಕರ್ಮಗಳ ಪ್ರತಿಫಲ ಮತ್ತು ಅಪರಾಧದ ಶಿಕ್ಷೆಯನ್ನೂ ಅದು ಬಲವಾಗಿ ಬೆಂಬಲಿಸುತ್ತದೆ. ಆದ್ದರಿಂದ ಅಪರಾಧಿಗೆ ಆತನ ಕೃತ್ಯಕ್ಕೆ ತಕ್ಕ ಶಿಕ್ಷೆ ನೀಡುವುದು ಒಂದು ಸತ್ಯಪ್ರಿಯ ಸಮಾಜದ ಹೊಣೆಗಾರಿಕೆಯೆಂದು ಅದು ಸಾರುತ್ತದೆ. ಯಾವ ವ್ಯಕ್ತಿ ಬೇಕಾದರೂ ಇಷ್ಟಬಂದಂತೆ ಅಶಾಂತಿ ಹರಡಲಿ ಮತ್ತು ಬಯಸುವಷ್ಟು ಅಕ್ರಮ- ಅತ್ಯಾಚಾರ ಮಾಡಲಿ ಹೇಗಿದ್ದರೂ ಅವನ ಪ್ರಾಣವು ಪವಿತ್ರವಾಗಿರುವುದು ಎಂದು ಅದು ಮುಕ್ತ ಪರವಾನಗಿ ನೀಡುವುದಿಲ್ಲ. ಆದ್ದರಿಂದ ಪ್ರತಿಯೊಬ್ಬನೂ ತನ್ನ ಮೇರೆಯೊಳಗೆ ಸ್ವತಂತ್ರನು, ಆದರೆ ಯಾರೂ ಈ ನಿಶ್ಚಿತ ಮೇರೆಯನ್ನು ಮೀರಿ ಇತರರ ಭೌತಿಕ ಮತ್ತು ಆಧ್ಯಾತ್ಮಿಕ ಶಾಂತಿಯನ್ನು ಭಂಗಗೊಳಿಸಬಾರದೆಂದು ಅದು ಕಾನೂನು ರಚಿಸಿದೆ. ಆದ್ದರಿಂದಲೇ ಇಸ್ಲಾಮ್ ಕ್ಷೋಭೆ ಹರಡುವುದನ್ನು ಕೊಲೆಗಿಂತಲೂ ದೊಡ್ಡ ಅಪರಾಧವೆಂದು ಪರಿಗಣಿಸಿದೆ.

ಪ್ರವಾದಿಯವರು(ಸ) ಹೇಳಿದರು- "ನಿನ್ನ ಸಹೋದರನಿಗೆ ನೆರವಾಗು, ಅವನು ಅಕ್ರಮಿಯಿರಲಿ ಅಥವಾ ಅಕ್ರಮಕ್ಕೆ ಒಳಗಾದವನಿರಲಿ." ಅನಂತರ ಪ್ರವಾದಿ(ಸ) ಅದರ ವಿವರಣೆಯನ್ನು ನೀಡಿದರು- ಅಕ್ರಮಿಯ ನೆರವೇನೆಂದರೆ ನಾವು ಅವನ ಕೈಹಿಡಿದು ಅವನನ್ನು ಅನ್ಯಾಯದಿಂದ ತಡೆಯುವುದು ಎಂದರು. ಅನ್ಯಾಯ ಮಾಡುವವನ ಅನ್ಯಾಯವನ್ನು ತಡೆಯುವಲ್ಲಿ ತೋರುವ ಕಾಠಿಣ್ಯವು ನಿಜವಾಗಿ ಕಾಠಿಣ್ಯವಲ್ಲ. ಅದು ಮೃದುತ್ವವಾಗಿದೆ. ಅದು ಸ್ವಯಂ ಆ ಅಕ್ರಮಿಗೆ ಮಾಡುವ ಸಹಾಯವಾಗಿದೆ. ಅದರಿಂದ ಅವನು ನರಕದ ಅತ್ಯಂತ ಕಠಿಣ ಶಿಕ್ಷೆಯಿಂದ ಪಾರಾಗಬಹುದು. ಅಲ್ಲಾಹನ ಮೇರೆಗಳನ್ನು ಸ್ಥಾಪಿಸುವುದು ಅರ್ಥಾತ್ ದಂಡ ಸಂಹಿತೆಯನ್ನು ಜಾರಿಗೊಳಿಸುವುದು ದಯೆ ಮತ್ತು ಸಮೃದ್ಧಿಗೆ ದಾರಿಯಾಗಿದೆ. ಪ್ರವಾದಿ(ಸ) ಹೇಳಿದರು: ಅಲ್ಲಾಹನ ದಂಡನಾ ನಿಯಮಗಳ ಪೈಕಿ ಒಂದನ್ನು ಸ್ಥಾಪಿಸುವುದರ ಸಮೃದ್ಧಿಯು 40 ದಿನಗಳ ಮಳೆಗಿಂತ ಅಧಿಕವಾಗಿದೆ. ಇದು ಜಗತ್ತಿನ ವಿಚಿತ್ರ ಧರ್ಮ! ಇದು ಮಾನವ ಪ್ರಾಣದ ಗೌರವದಲ್ಲಿ ಎಷ್ಟು ಕಠಿಣವಾಗಿದೆಯೋ ಅದಕ್ಕಿಂತಲೂ ಹೆಚ್ಚಾಗಿ ಅಕ್ರಮಿಗೆ ಅವನ ಅನ್ಯಾಯದ ಶಿಕ್ಷೆ ನೀಡುವಲ್ಲೂ ಕಠಿಣವಾಗಿದೆ. ಇಸ್ಲಾಮಿನ ದೃಷ್ಟಿಯಲ್ಲಿ ಒಂದು ವಸ್ತು ಮಾನವ ಪ್ರಾಣಕ್ಕಿಂತಲೂ ಹೆಚ್ಚು ಅಮೂಲ್ಯವಾಗಿದೆ. ಅದುವೇ ನ್ಯಾಯ. ನ್ಯಾಯವು ಒಬ್ಬನ ರಕ್ತ ಹರಿಸಬೇಕೆಂದು ಬಯಸಿದರೆ ಆ ರಕ್ತ ಹರಿಸುವುದು ಕೇವಲ ಧರ್ಮಸಮ್ಮತ ಮಾತ್ರವಲ್ಲ ಅದು ಕಡ್ಡಾಯ ಕರ್ತವ್ಯವಾಗುತ್ತದೆ. ಅದನ್ನು ಹರಿಸದೆ ಇರುವುದು ಅಲ್ಲಾಹನಿಗೆ

ತೋರುವ ದೊಡ್ಡ ಅವಿಧೇಯತೆಯಾಗಿದೆ. ಎಷ್ಟರ ತನಕ ಮನುಷ್ಯನು ನ್ಯಾಯವನ್ನು ಗೌರವಿಸುತ್ತಾನೋ ಅಷ್ಟರ ತನಕ ಅವನ ರಕ್ತವು ಗೌರವಾರ್ಹವಾಗಿರುತ್ತದೆ. ಯಾವಾಗ ಆತ ಬಂಡಾಯ ಹೂಡಿ ನ್ಯಾಯದ ಮೇಲೆ ಕೈ ಮಾಡುತ್ತಾನೋ ಆಗ ಆತ ತನ್ನ ರಕ್ತದ ಮೌಲ್ಯವನ್ನು ಕಳಕೊಳ್ಳುತ್ತಾನೆ.

ಜಿಹಾದ್ ಅಂದರೆ ಅಲ್ಲಾಹನ ಧರ್ಮದ ಉತ್ತುಂಗತೆಗಾಗಿ ಮಾಡುವ ಎಲ್ಲ ರೀತಿಯ ಹೋರಾಟ. 'ಕಿತಾಲ್' ಎಂದರೆ ಅಲ್ಲಾಹನ ಮಾರ್ಗದಲ್ಲಿ ಮಾಡುವ ಯುದ್ಧ. ಇವೆರಡೂ ಅಲ್ಲಾಹನ ಭೂಮಿಯಲ್ಲಿ ಕ್ಷೋಭೆಯನ್ನು ಅಳಿಸಿ ಶಾಂತಿಯನ್ನು ನೆಲೆಸುವ ಒಂದು ಮಾಧ್ಯಮವಾಗಿದೆ. ವಿಶೇಷವಾಗಿ ಯಾವಾಗ ವ್ಯಕ್ತಿಗಳ ಬದಲು ಸಂಘಟನೆಗಳು ಮತ್ತು ಜನಾಂಗಗಳು ಜಿಪುಣತೆ ಮತ್ತು ದುರಾಸೆಯಿಂದ ಅಂಧರಾಗಿ ಎಲ್ಲ ಮೇರೆಗಳನ್ನು ಮೀರುತ್ತಾರೋ ಆಗ ಅವರ ಅತ್ಯಾಚಾರ ಮತ್ತು ಪ್ರಕ್ಷೋಭೆಯನ್ನು ತಡೆಯಲು ಇದು ಅನಿವಾರ್ಯವಾಗುತ್ತದೆ.

ಯುದ್ಧವು ಅನಿವಾರ್ಯವಾಗುವ, ಮಾತ್ರವಲ್ಲ ಕಡ್ಡಾಯ ಕರ್ತವ್ಯವಾಗುವ ಅನೇಕ ಸಂದರ್ಭಗಳು ಮಾನವ ಇತಿಹಾಸದಲ್ಲಿ ಎದುರಾಗುತ್ತವೆ. ಆಗ ಕ್ಷೋಭೆ ಮತ್ತು ಕೇಡನ್ನು ಅಳಿಸಲು ಸತ್ಯದ ಪಕ್ಷವಹಿಸುವವರು ರಂಗಕ್ಕೆ ಇಳಿಯಬೇಕಾಗುತ್ತದೆ. ಅಲ್ಲಾಹನು ಹೀಗೆ ಹೇಳಿರುವನು-

**"ಅಲ್ಲಾಹನು ಜನರಲ್ಲಿ ಕೆಲವರನ್ನು ಬೇರೆ ಕೆಲವರ ಮೂಲಕ ನೀಗಿಸದಿರುತ್ತಿದ್ದರೆ ಅಲ್ಲಾಹನ ನಾಮವನ್ನು ಅತಿ ಹೆಚ್ಚಾಗಿ ಸ್ಮರಿಸಲಾಗುತ್ತಿರುವ ಆಶ್ರಮಗಳೂ ಇಗರ್ಜಿಗಳೂ ಯಹೂದಿಯರ ಆರಾಧನಾಲಯಗಳೂ ಮಸೀದಿಗಳೂ ಧ್ವಂಸಗೊಳ್ಳುತ್ತಿದ್ದುವು."**

**(ಪವಿತ್ರ ಕುರ್‌ಆನ್, 22:40)**

**"ಅವರು ಯುದ್ಧದ ಕಿಡಿಯನ್ನು ಪ್ರಜ್ವಲಿಸಿದಾಗಲೆಲ್ಲಾ ಅಲ್ಲಾಹನು ಅದನ್ನು ಆರಿಸಿ ಬಿಡುತ್ತಾನೆ. ಅವರು ಭೂಮಿಯಲ್ಲಿ ಕ್ಷೋಭೆ ಹಬ್ಬಿಸಲು ಯತ್ನಿಸುತ್ತಾರೆ. ಆದರೆ ಅಲ್ಲಾಹನು ಕ್ಷೋಭೆಯುಂಟು ಮಾಡುವವರನ್ನು ಖಂಡಿತ ಮೆಚ್ಚುವುದಿಲ್ಲ."**

**(ಪವಿತ್ರ ಕುರ್‌ಆನ್, 5:64)**

ಆದ್ದರಿಂದ ದೇವನ ಈ ನಿರ್ಣಯವನ್ನು ಜಾರಿಗೆ ತರಲು ಸತ್ಯಪ್ರಿಯ ಜನರು ಅಲ್ಲಾಹನ ಮಾರ್ಗದ ಜಿಹಾದ್‌ಗೆ ಪ್ರಾಣದ ಹಂಗು ತೊರೆದು ಇಳಿಯಬೇಕಾಗುತ್ತದೆ. ತನ್ಮೂಲಕ ಅವರು ಕ್ಷೋಭೆ, ಅಶಾಂತಿ, ದುರಾಸೆ, ಹೊಟ್ಟೆಕಿಚ್ಚು, ದ್ವೇಷ, ಪಕ್ಷಪಾತ, ಸಂಕುಚಿತ ಮನೋಭಾವಗಳ ಬೆಂಕಿಯನ್ನು ನಂದಿಸ ಬಯಸುತ್ತಾರೆ. ಪವಿತ್ರ ಕುರ್‌ಆನಿನ ಅನೇಕ ವಚನಗಳಲ್ಲಿ ಜಿಹಾದನ್ನು ಲೌಕಿಕ ಧ್ಯೇಯಗಳಿಗಾಗಿ ಹೂಡುವ ಯುದ್ಧಗಳಿಗಿಂತ ಭಿನ್ನವಾದ ಯುದ್ಧವೆಂದು ಸಾರಲಾಗಿದೆ. ಅದು ಕೇವಲ ಅಲ್ಲಾಹನಿಗಾಗಿ ಆಗಿರುತ್ತದೆ. ಅದರ ಗುರಿ ಕೇವಲ ಅಕ್ರಮ-ಅತ್ಯಾಚಾರಗಳನ್ನು ನಡೆಸುವ ಜನರಾಗಿದ್ದಾರೆ. ಜಿಹಾದ್‌ನ ಮಹತ್ವದ ಕುರಿತು ಕುರ್‌ಆನ್ ಹೀಗೆ ಹೇಳಿದೆ:

"ಸತ್ಯವಿಶ್ವಾಸಿಗಳೇ! ನಿಮ್ಮನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವಂತಹ ಒಂದು ವ್ಯಾಪಾರವನ್ನು ನಾನು ನಿಮಗೆ ತೋರಿಸಿ ಕೊಡಲೇ? ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಸಂಪತ್ತುಗಳಿಂದಲೂ ಜೀವಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ, ನಿಮ್ಮ ಪಾಲಿಗೆ ಇದೇ ಉತ್ತಮವಾಗಿದೆ." (61: 10-11)

ಇಸ್ಲಾಮಿನ ಜಿಹಾದ್ ಭಗವದ್ಗೀತೆಯ ಧರ್ಮಯುದ್ಧದಂತೆ ಲೋಕದ ಆಧಿಪತ್ಯವನ್ನು ಭೋಗಿಸಲಿಕ್ಕಾಗಿ ಹೂಡಲಾಗುವುದಿಲ್ಲ. ಬದಲಾಗಿ ಕುರ್‌ಆನಿನಲ್ಲಿ ಎಲ್ಲೆಲ್ಲ ಜಿಹಾದ್‌ನ ಪ್ರಸ್ತಾಪವಿದೆಯೋ ಅಲ್ಲೆಲ್ಲ ಅದನ್ನು ಕೇವಲ ಅಲ್ಲಾಹನ ಸಂಪ್ರೀತಿ, ಅವನ ಬಳಿ ಉನ್ನತ ಸ್ಥಾನಮಾನ ಗಳಿಸುವ ಮತ್ತು ಅವನ ಕಠಿಣ ಶಿಕ್ಷೆಯಿಂದ ಪಾರಾಗುವ ಉದ್ದೇಶಕ್ಕಾಗಿ ಮಾತ್ರ ಹೂಡಬೇಕೆಂದು ಹೇಳಲಾಗಿದೆ. ಆದ್ದರಿಂದ ಸತ್ಯವಿಶ್ವಾಸದ ಬಳಿಕ ಅದಕ್ಕೆ ಮಾನವ ಕರ್ಮಗಳ ಪೈಕಿ ಅತ್ಯುನ್ನತ ಸ್ಥಾನಮಾನವನ್ನು ನೀಡಲಾಗಿದೆ.

ಕೆಡುಕನ್ನು ಯಾವ ಸ್ಥಿತಿಯಲ್ಲೂ ಸಹಿಸದೆ ಅದನ್ನು ನೀಗಿಸಲು ಎಲ್ಲ ರೀತಿಯ ತ್ಯಾಗಗಳನ್ನು ಸಹಿಸುವುದು ಮಾನವ ಸಭ್ಯತೆಯ ಅತ್ಯುನ್ನತ ಸ್ಫೂರ್ತಿಯಾಗಿದೆ. ಇತರರ ಪಾಲಿಗೆ ಕೆಡುಕನ್ನು ಸಹಿಸಿಕೊಂಡಿರುವವನ ನೈತಿಕ ದೌರ್ಬಲ್ಯವು ಒಂದು ದಿನ ಅವನನ್ನು ಸ್ವತಃ ಆ ಕೆಡುಕಿನಲ್ಲಿ ಸಿಲುಕಿಸಿ ಬಿಡುವುದು. ಅನಂತರ ಅವನ ಪಾಲಿಗೆ ನಿಂದ್ಯತೆ ಮತ್ತು ನೀಚತೆಯು ವಿಧಿಸಲ್ಪಡುತ್ತದೆ.

ಜಿಹಾದ್‌ನ ಉದ್ದೇಶ ಮನುಷ್ಯನನ್ನು ನಿಂದ್ಯತೆ-ನೀಚತೆಯ ಜೀವನದಿಂದ ಹೊರ ತೆಗೆದು ಘನತೆ-ಗೌರವಗಳ ಜೀವನ ಸಾಗಿಸುವ ಸಾಧನಗಳನ್ನು ಉಂಟು ಮಾಡುವುದಾಗಿದೆ. ಯಾವ ಜನಾಂಗ ಮತ್ತು ವ್ಯಕ್ತಿಗಳು ಹೇಡಿತನ ಮತ್ತು ಭಯದ ಜೀವನ ನಡೆಸಲು ಸಿದ್ಧರಾಗುತ್ತಾರೋ ಅಲ್ಲಾಹನ ಗ್ರಂಥದ ಪ್ರಕಾರ ದೇವಚರರು ಮರಣದ ವೇಳೆ ಅವರನ್ನು ಈ ರೀತಿ ಕೇಳುವರು:

"ತಮ್ಮ ಮೇಲೆ ತಾವೇ ಅಕ್ರಮವೆಸಗುತ್ತಿದ್ದವರ ಪ್ರಾಣವನ್ನು ದೇವಚರರು ವಶಪಡಿಸಿಕೊಂಡಾಗ ಅವರೊಡನೆ, 'ನೀವು ಯಾವ ಸ್ಥಿತಿಯಲ್ಲಿದ್ದಿರಿ?' ಎಂದು ಕೇಳಿದರು. ಅವರು, 'ನಾವು ಭೂಮಿಯಲ್ಲಿ ಅಶಕ್ತರೂ ವಿವಶರೂ ಆಗಿದ್ದೆವು.' ಎಂದು ಉತ್ತರ ಕೊಟ್ಟರು. ಆಗ ದೇವಚರರು, 'ನಿಮಗೆ ವಲಸೆ ಹೋಗಲು ಭೂಮಿಯು ವಿಶಾಲವಿರಲಿಲ್ಲವೇ?' ಎಂದು ಕೇಳಿದರು. ಇಂತಹವರ ವಾಸಸ್ಥಳವು ನರಕವೇ ಆಗಿದೆ. ಅದು ಅತ್ಯಂತ ಕೆಟ್ಟ ವಾಸಸ್ಥಾನ." (ಪವಿತ್ರ ಕುರ್‌ಆನ್, 4:97)

ಇಲ್ಲಿ ದೌರ್ಬಲ್ಯ ಮತ್ತು ನಿಂದ್ಯತೆಯ ಜೀವನದ ಮೇಲೆ ತೃಪ್ತರಾಗಿದ್ದವರನ್ನು ತಮ್ಮ ಮೇಲೆ ತಾವೇ ಅನ್ಯಾಯ ಮಾಡಿದವರು ಎನ್ನಲಾಗಿದೆ. ಈ ನೆಪವೊಡ್ಡುವವರಲ್ಲಿ ದೇವಚರರು, "ಹಾಗಾದರೆ ಆ ದೇಶವನ್ನು ಬಿಟ್ಟು ಬೇರೆಡೆ ಯಾಕೆ ಹೋಗಲಿಲ್ಲ?" ಎಂದು ಕೇಳುತ್ತಾರೆ. ಕೇವಲ ಶರೀರದ ರಕ್ಷಣೆ ಮತ್ತು ಶಾರೀರಿಕ ಸೌಲಭ್ಯಗಳಿಗೆ ಘನತೆ-ಗೌರವ ಮತ್ತು ಸ್ವಾಭಿಮಾನಕ್ಕಿಂತ ಹೆಚ್ಚು ಆದ್ಯತೆ ಕೊಡುವವರ ಶಿಕ್ಷೆಯೂ ಪಾಠಬೋಧಕವಾಗಿದ್ದು ಅವರ ನೆಲೆ ನರಕವಾಗಿದೆ.

"ಯಾರು ನಿಮ್ಮ ಮಾನವ ಹಕ್ಕುಗಳನ್ನು ಕಸಿಯಲು ಪ್ರಯತ್ನಿಸುತ್ತಾರೋ, ನಿಮ್ಮ ಮೇಲೆ ಅಕ್ರಮ-ಅತ್ಯಾಚಾರಗಳನ್ನೆಸಗುತ್ತಾರೋ, ನಿಮ್ಮ ಸೊತ್ತು-ವಿತ್ತಗಳನ್ನು ನಿಮ್ಮಿಂದ ಕಸಿಯುತ್ತಾರೋ, ನಿಮ್ಮಿಂದ ನಿಮ್ಮ ಧರ್ಮ ಮತ್ತು ಆತ್ಮಸಾಕ್ಷಿಯ ಸ್ವಾತಂತ್ರ್ಯವನ್ನು ಕಸಿಯುತ್ತಾರೋ, ನಿಮ್ಮನ್ನು ನಿಮ್ಮ ಧರ್ಮದ ಪ್ರಕಾರ ಜೀವನ ಸಾಗಿಸುವುದರಿಂದ ತಡೆಯುತ್ತಾರೋ, ನಿಮ್ಮ ಸಾಮೂಹಿಕ ವ್ಯವಸ್ಥೆಯನ್ನು ಛಿನ್ನ-ಭಿನ್ನ ಗೊಳಿಸಲು ಬಯಸುತ್ತಾರೋ- ನೀವು ಇಸ್ಲಾಮಿನ ಅನುಯಾಯಿಯಾದ ಕಾರಣಕ್ಕೆ ಮಾತ್ರ ನಿಮ್ಮ ಮೇಲೆ ಆಕ್ರಮಣ ಮಾಡುತ್ತಾರೋ ಅವರ ವಿರುದ್ಧ ಖಂಡಿತ ದೌರ್ಬಲ್ಯವನ್ನು ಪ್ರದರ್ಶಿಸದಿರಿ ಮತ್ತು ನಿಮ್ಮೆಲ್ಲ ಶಕ್ತಿಯನ್ನು ಆ ಅನ್ಯಾಯವನ್ನು ತೊಲಗಿಸಲಿಕ್ಕಾಗಿ ವ್ಯಯಿಸಿರಿ." ಇದು ಸಯ್ಯಿದ್ ಮೌದೂದಿಯವರು 'ಅಲ್ ಜಿಹಾದ್ ಫಿಲ್ ಇಸ್ಲಾಮ್' ಎಂಬ ಗ್ರಂಥದಲ್ಲಿ ಜಿಹಾದ್‌ಗೆ ನೀಡಿದ ವ್ಯಾಖ್ಯಾನ.

ಜಿಹಾದನ್ನು ಮುಸ್ಲಿಮರ ಧಾರ್ಮಿಕ ಅಸ್ತಿತ್ವದ ಸಂರಕ್ಷಣೆಗಾಗಿ ಮತ್ತು ಕ್ಷೋಭೆಗೆ ಮಣಿಯುವುದರಿಂದ ತಡೆಯಲಿಕ್ಕಾಗಿ ಕಡ್ಡಾಯ ಕರ್ತವ್ಯವೆಂದು ಸಾರಲಾಗಿದೆ. ಆದರೆ ಆ ಬಗ್ಗೆ ಬಹಳ ಕಠಿಣವಾದ ನಿಬಂಧನೆಗಳು ಮತ್ತು ಕಠಿಣ ಜವಾಬ್ದಾರಿಗಳನ್ನು ಹೊರಿಸ ಲಾಗಿದೆ. ಇದು ಪ್ರತಿಯೊಂದು ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ಜಗಳಕ್ಕೆ ಜಿಹಾದ್‌ನ ಶೀರ್ಷಿಕೆ ನೀಡಲಿಕ್ಕಲ್ಲ. ಜಿಹಾದ್ ಎಂದರೆ ಅನ್ಯಾಯ, ಬರ್ಬರತೆಗಳ ಉತ್ತರ ವಾಗಿದ್ದರೂ ಜಿಹಾದ್ ಮಾಡುವವರನ್ನು ಎಲ್ಲ ರೀತಿಯ ಅನ್ಯಾಯ ಮತ್ತು ಬರ್ಬರತೆ ಯಿಂದ ತಡೆಯಲಾಗಿದೆ.

ಸತ್ಯಧರ್ಮ ಸ್ವೀಕರಿಸುವವರ ಹಾದಿಯಲ್ಲಿ ತಡೆಯೊಡ್ಡುವವರ ವಿರುದ್ಧ ಹೋರಾಡುವುದು ಕೂಡಾ ಜಿಹಾದ್ ಆಗಿದೆ. ಸಯ್ಯಿದ್ ಮೌದೂದಿಯವರ ಮಾತಿನಲ್ಲಿ, "ಯಾರನ್ನಾದರೂ ದಾರಿಯಿಂದ ತಡೆಯುವುದರ ಮೂರು ರೂಪಗಳಿರಬಹುದು. ಪ್ರಥಮವಾಗಿ ಯಾರು ಬೇರೆ ದಾರಿಯಲ್ಲಿ ನಡೆಯುತ್ತಾರೋ ಅವರನ್ನು ಈ ದಾರಿಗೆ ಬರುವುದರಿಂದ ತಡೆಯುವುದು. ಎರಡನೆಯದಾಗಿ ಯಾರು ಈ ದಾರಿಯಲ್ಲಿ ನಡೆಯುತ್ತಿರುವರೋ ಅವರನ್ನು ಬಲಾತ್ಕಾರವಾಗಿ ಈ ದಾರಿಯಿಂದ ದೂರ ಸರಿಸುವುದು. ಮೂರನೆಯದಾಗಿ ಈ ದಾರಿಯಲ್ಲಿ ನಡೆಯುವವರ ಹಾದಿಯಲ್ಲಿ ಮುಳ್ಳುಗಳನ್ನು ಹರಡುವುದು, ಅವರನ್ನು ಭಯ-ಭೀತಗೊಳಿಸುವುದು. ಅವರು ನಡೆಯುವುದನ್ನೇ ಬಿಟ್ಟು ಬಿಡುವಂತೆ ಅವರಿಗೆ ಕಿರುಕುಳ ಕೊಡುವುದು. ಯಾವ ವರ್ಗವು ಜನರನ್ನು ಸತ್ಯಧರ್ಮದ ಹಾದಿಯಿಂದ ತಡೆಯುತ್ತದೋ ಅದನ್ನು ದಾರಿಯಿಂದ ಸರಿಸಿ ಬಿಡುವುದು ಮತ್ತು ಅದರ ಶಕ್ತಿಯನ್ನು ಮುರಿಯುವುದು ಮುಸ್ಲಿಮರ ನೈತಿಕ ಹಕ್ಕು ಮತ್ತು ಧಾರ್ಮಿಕ ಕರ್ತವ್ಯವಾಗಿದೆ."

**(ಅಲ್ ಜಿಹಾದ್ ಫಿಲ್ ಇಸ್ಲಾಮ್, ಪುಟ- 68)**

ಕೆಲವರು ಸಮಾಜದ ಶಾಂತಿಯನ್ನು ಕೆಡಿಸುವ ಮತ್ತು ಹಿಂಸೆಯ ಮೂಲಕ ನ್ಯಾಯದೊಂದಿಗೆ ಸ್ಥಾಪಿತವಾದ ಸರಕಾರವನ್ನು ಪದಚ್ಯುತಗೊಳಿಸುವ ಪ್ರಯತ್ನ ಮಾಡಿದರೆ, ಶಾಂತಿಯಿರುವಲ್ಲಿ ಕ್ಷೋಭೆ ಹರಡಿದರೆ, ದರೋಡೆ, ಕೊಲೆ-ಸುಲಿಗೆಗಳನ್ನು ವ್ಯಾಪಕಗೊಳಿಸಿದರೆ ಆಗಲೂ ಅವರ ವಿರುದ್ಧ ಜಿಹಾದ್ ಕಡ್ಡಾಯವಾಗುತ್ತದೆ.

ಜಿಹಾದ್‌ನ ಒಂದು ರೂಪವು ಹೀಗೂ ಇದೆ. ಸತ್ಯವಿಶ್ವಾಸಿಗಳ ಯಾವುದಾದರೂ ಒಂದು ಗುಂಪು ತನ್ನ ದೌರ್ಬಲ್ಯ ಮತ್ತು ಅಸಹಾಯಕತೆಯಿಂದಾಗಿ ಶತ್ರುಗಳ ಮುಷ್ಟಿಯಲ್ಲಿ ಸೆರೆಯಾಗಿದ್ದರೆ ಮತ್ತು ಅದು ತನ್ನನ್ನು ಅದರಿಂದ ಬಿಡಿಸಿಕೊಳ್ಳುವಷ್ಟು ಸಾಮರ್ಥ್ಯ ಹೊಂದಿರದಿದ್ದರೆ ಅಂತಹ ಸಂದರ್ಭದಲ್ಲಿ ಈ ಕರ್ತವ್ಯವು ಸ್ವತಂತ್ರರೂ ಯುದ್ಧದ ಸಾಮರ್ಥ್ಯವಿರುವವರೂ ಆದವರ ಮೇಲೆ ಬೀಳುತ್ತದೆ. ಅವರು ತಮ್ಮ ಮರ್ದಿತ ಸಹೋದರರನ್ನು ಈ ಅನ್ಯಾಯದಿಂದ ವಿಮೋಚಿಸಲಿಕ್ಕಾಗಿ ಯುದ್ಧ ಹೂಡಬೇಕು. ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

**"ಓ ನಮ್ಮ ಪ್ರಭೂ, ಅಕ್ರಮಿಗಳು ವಾಸಿಸುವ ಈ ನಾಡಿನಿಂದ ನಮ್ಮನ್ನು ಹೊರ ತೆಗೆ. ನೀನು ನಿನ್ನ ಕಡೆಯಿಂದ ನಮಗೊಬ್ಬ ಮೇಲ್ವಿಚಾರಕನನ್ನು ಮತ್ತು ಒಬ್ಬ ಸಹಾಯಕನನ್ನು ನಿಯೋಜಿಸು ಎಂದು ಮೊರೆಯಿಡುತ್ತಿರುವ ಮರ್ದನಕ್ಕೊಳಗಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗಾಗಿ, ನೀವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡದಿರಲು ಕಾರಣವೇನು?" (4:75)**

ಕೆಡುಕು 'ಕ್ಷೋಭೆ ಮತ್ತು ಅಶಾಂತಿ'ಯ ರೂಪ ತಾಳಿದಾಗ ಅದರ ವಿರುದ್ಧ ಜಿಹಾದ್ ಮಾಡುವುದು ಇಸ್ಲಾಮೀ ಸಮಾಜದ ಮೇಲೆ ಕಡ್ಡಾಯವಾಗುತ್ತದೆ. ಕ್ಷೋಭೆ ಮತ್ತು ಅಶಾಂತಿಯನ್ನು ವಿದ್ವಾಂಸರು ವಿವರಿಸಿದ್ದಾರೆ. ಅದರಲ್ಲಿ ದುರ್ಬಲರ ಮೇಲೆ ಅನ್ಯಾಯ, ಅವರ ನೈಜ ಹಕ್ಕುಗಳನ್ನು ಕಸಿಯುವುದು, ಒತ್ತಾಯ-ಬಲಾತ್ಕಾರ, ಸತ್ಯಧರ್ಮದಲ್ಲಿ ನಡೆಯುವುದರಿಂದ ಜನರನ್ನು ಶಕ್ತಿಯ ಬಲದಿಂದ ತಡೆಯುವುದು, ಅವರನ್ನು ಕೆಡುಕಿನಲ್ಲಿ ತೊಡಗಿಸುವುದು, ಕೆಡುಕಿಗಾಗಿ ಗುಂಪು ಕಟ್ಟಿಕೊಳ್ಳುವುದು ಇತ್ಯಾದಿ ಸೇರಿವೆ. ಕ್ಷೋಭೆಯ ಅರ್ಥವ್ಯಾಪ್ತಿಯಲ್ಲಿ ಮನುಷ್ಯರ ಮಧ್ಯೆ ವರ್ಣ-ವರ್ಗ ಭೇದಗಳನ್ನು ಮಾಡುವುದು, ಒಡೆದು ಆಳುವುದು, ಬಲಹೀನರನ್ನು ಅನ್ಯಾಯವಾಗಿ ಕೊಲ್ಲುವುದು, ನ್ಯಾಯದಿಂದ ಜನರನ್ನು ವಂಚಿತಗೊಳಿಸುವುದು, ವ್ಯಭಿಚಾರ ಮತ್ತು ಅಶ್ಲೀಲತೆ ಹರಡುವುದು ಮತ್ತು ಮಾನವ ನಾಗರಿಕತೆಯ ಬುನಾದಿಯಾಗಿರುವ ಸಂಪರ್ಕ ಮತ್ತು ಸಂಬಂಧಗಳನ್ನು ಕೆಡಿಸುವುದು ಕೂಡಾ ಸೇರುತ್ತದೆ. ಆದ್ದರಿಂದ ಸಂಘಟಿತ ಹೋರಾಟದ ಮೂಲಕ ಇಂತಹ ಅಕ್ರಮಿ ಸರಕಾರವನ್ನು ಕೊನೆಗೊಳಿಸಲು ಯತ್ನಿಸುವುದು ಕೂಡಾ ಸತ್ಯವಿಶ್ವಾಸಿಯ ಕರ್ತವ್ಯವಾಗಿದೆ.

ಪಾಶ್ಚಾತ್ಯ ಜನಾಂಗಗಳು ಸಾಮ್ರಾಜ್ಯಶಾಹಿತ್ವದ (Imperialism) ಮತ್ತಿನಲ್ಲಿ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಜಗತ್ತಿನ ಅನೇಕ ಜನಾಂಗ ಮತ್ತು ರಾಷ್ಟ್ರಗಳನ್ನು ಅಧೀನಗೊಳಿಸಿದುವು. ಭಾರತದ ಇತಿಹಾಸವು ಅವರ ಅಕ್ರಮ-ಅನ್ಯಾಯ ಗಳಿಂದ ತುಂಬಿದೆ. ಅವರು ತಮ್ಮ ವಂಚನೆಯಿಂದ ಒಡೆದು ಆಳುವ ನೀತಿಯನ್ನು ಅವಲಂಬಿಸಿ ಇಲ್ಲಿನ ಚರಿತ್ರೆಯನ್ನು ರಕ್ತಸಿಕ್ತಗೊಳಿಸಿದರು. ಈ ದೇಶಗಳಲ್ಲಿ ಅವರು ನಡೆಸಿದ ಆರ್ಥಿಕ ಮತ್ತು ಸಾಂಸ್ಕೃತಿಕ ಶೋಷಣೆಯು ಚೆಂಗೀಸ್ ಖಾನ್ ಮತ್ತು ಹಲಾಕೂರನ್ನೂ ನಾಚಿಸುವಂತಹದ್ದಾಗಿದೆ. ಇಂದು ಜಗತ್ತಿನ ಏಕೈಕ ಶಕ್ತಿಶಾಲಿ ರಾಷ್ಟ್ರವು (Super power) ಪ್ರಜಾಪ್ರಭುತ್ವ, ಜಾಗತಿಕ ಸಂಸ್ಕೃತಿ ಮತ್ತು ಮಾನವ ಹಕ್ಕುಗಳ

ರಕ್ಷಣೆಯ ಹೆಸರಲ್ಲಿ ಅದೇ ಇತಿಹಾಸವನ್ನು ಪುನರಾವರ್ತನೆ ಮಾಡುತ್ತಿದೆ. ಅದಕ್ಕಾಗಿ ಅದು ಜಗತ್ತಿನ ಕೆಲವು ರಾಷ್ಟ್ರಗಳನ್ನು ಬಲಿ ನೀಡ ಬಯಸುತ್ತದೆ. ಈ ನಿಟ್ಟಿನಲ್ಲಿ ಅತ್ಯಂತ ಸುಲಭದ ಗುರಿ (Soft Target) ಇಸ್ಲಾಮ್ ಮತ್ತು ಮುಸ್ಲಿಮರು ಎಂದು ಅದಕ್ಕೆ ಕಂಡು ಬಂದಿದೆ. ಈ ಸಮುದಾಯದ ಬಳಿ ಅನ್ಯಾಯದ ವಿರುದ್ಧ ಹೋರಾಟದ ಒಂದು ದೀರ್ಘ ಮತ್ತು ಉಜ್ವಲ ಪರಂಪರೆಯಿದೆ. ಆದ್ದರಿಂದ ಪಶ್ಚಿಮವು ಅದರಿಂದ ಹೆದರಿ ಕಂಪಿಸುತ್ತಿದೆ. ಸದ್ಯ ಪಶ್ಚಿಮ ಏಶ್ಯಾದ ಕೆಲವು ರಾಷ್ಟ್ರಗಳು ಅದಕ್ಕೆ ಚೀನಾಕ್ಕಿಂತಲೂ ಹೆಚ್ಚು ಅಪಾಯಕಾರಿ ಯಾಗಿ ಕಂಡಿವೆ. ಆದ್ದರಿಂದ ಜಿಹಾದ್ ಮತ್ತು ಭಯೋತ್ಪಾದನೆಯನ್ನು ಸಮಾನಾರ್ಥದ ಪದಗಳೆಂದು ನಂಬಿಸಲು ಅದು ನಿರಾಧಾರ ವಾದಗಳನ್ನು ಮಂಡಿಸುತ್ತಿದೆ. ವಸ್ತುತಃ ಅವುಗಳಿಗೆ ವಾಸ್ತವಿಕತೆಯೊಂದಿಗೆ ಯಾವ ಸಂಬಂಧವೂ ಇಲ್ಲ.

## ಸಶಸ್ತ್ರ ಹೋರಾಟ ಮತ್ತು ಇಸ್ಲಾಮ್

ಇಂದು ಭಯೋತ್ಪಾದನೆಯ ಜತೆ ಜತೆಗೇ ಜಿಹಾದ್‌ನ ಪ್ರಸ್ತಾಪ ಇರುತ್ತದೆ. ಮಾಧ್ಯಮಗಳು ಈ ಎರಡು ಪದಗಳನ್ನು ಪರಸ್ಪರ ಬೆರೆಸಿ ಬಿಡುತ್ತವೆ. ಒಂದು ವರ್ಗದ ಮೇಲೆ ಭಯೋತ್ಪಾದನೆಯ ಆರೋಪ ಹೊರಿಸಿ ಅವರ ಬಾಯಿಯಿಂದ ನಾವು ಮುಜಾಹಿದ್‌ಗಳು, ನಾವು ಜಿಹಾದ್ ಮಾಡುತ್ತಿದ್ದೇವೆ ಎಂದು ಹೇಳಿಸುತ್ತಾರೆ. ಇಸ್ಲಾಮಿನಲ್ಲಿ ಯಾವ ಸಂದರ್ಭಗಳಲ್ಲಿ ಶಕ್ತಿಯನ್ನು ಬಳಸುವ ಅನುಮತಿಯಿದೆ, ಯಾವ ಸಂದರ್ಭ ಗಳಲ್ಲಿ ಇಲ್ಲ, ಶಕ್ತಿಯನ್ನು ಹೇಗೆ ಬಳಸಬೇಕು, ಹೇಗೆ ಬಳಸಬಾರದು ಎಂಬ ವಿಷಯ ಸ್ಪಷ್ಟವಾಗಿ ಲಿಖಿತ(Codified)ವಾಗಿಲ್ಲದಿರುವುದರಿಂದ ಮಾಧ್ಯಮಗಳಿಗೆ ಈ ಕುಪ್ರಚಾರ (Propaganda)ದಲ್ಲಿ ಇನ್ನಷ್ಟು ಲಾಭ ಸಿಗುತ್ತದೆ. ಆದ್ದರಿಂದ ಯಾವೆಲ್ಲ ಗುಂಪುಗಳು ಜಿಹಾದ್‌ನ ಘೋಷಣೆ ಮಾಡುತ್ತದೋ ಅದನ್ನೆಲ್ಲಾ ಸರಿಯೆಂದು ಒಪ್ಪಿಕೊಳ್ಳಲಾಗುತ್ತದೆ. ಮುಸ್ಲಿಮರು ಶಾಮೀಲಾಗಿರುವ ಎಲ್ಲಾ ಹಿಂಸಾಕೃತ್ಯಗಳನ್ನು ಮಾಧ್ಯಮಗಳು ತಮ್ಮ ಕಡೆಯಿಂದ ಭಯೋತ್ಪಾದನೆ ಎಂದು ಹೇಳಿ ಅದನ್ನು ಮಾಡುವವರ ನಿಲುವನ್ನು ಹೇಗೆ ವಿವರಿಸುತ್ತವೆಂದರೆ ಓದುಗರು ಅದನ್ನು ಜಿಹಾದ್ ಎಂದೇ ನಂಬಬೇಕು.

ಶಕ್ತಿಯ ಬಳಕೆಯ ಅನೇಕ ರೂಪಗಳಿವೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ವಿರುದ್ಧ ಅಥವಾ ಒಬ್ಬ ವ್ಯಕ್ತಿ ಒಂದು ವರ್ಗದ ವಿರುದ್ಧ ನಡೆಸುವ ಶಕ್ತಿಯ ಪ್ರಯೋಗವನ್ನು ವೈಯಕ್ತಿಕವೆಂದು ಹೇಳಬಹುದು.

ಅದರ ಇನ್ನೊಂದು ರೂಪವು ಒಂದು ವರ್ಗವು ತನ್ನದೇ ದೃಷ್ಟಿಕೋನದ ಇನ್ನೊಂದು ವರ್ಗದ ವಿರುದ್ಧ ಶಕ್ತಿಯನ್ನು ಬಳಸುವುದಾಗಿದೆ. ಉದಾ: ಒಂದು ನಗರದ ಎರಡು ವರ್ಗಗಳು, ಒಂದು ದೇಶದ ಎರಡು ಜನಾಂಗಗಳು, ಒಂದು ಧರ್ಮದ ಎರಡು ಪಂಗಡಗಳು, ಒಂದು ಪ್ರದೇಶದ ಎರಡು ಗೋತ್ರಗಳು ಪರಸ್ಪರ ಸಶಸ್ತ್ರ ಹೋರಾಟ ನಡೆಸುವುದು. ಈ ಸಂಘರ್ಷದಲ್ಲಿ ಸರಕಾರವು ಶಾಮೀಲಾಗಿರದಿದ್ದರೆ ಹೀಗೆ ಶಕ್ತಿಯ ಬಳಕೆಯನ್ನು ಸಾಮೂಹಿಕವೆನ್ನಬಹುದು.

ಮೂರನೆಯದು ಒಂದು ಸರಕಾರವು ಇನ್ನೊಂದು ಸರಕಾರದ ವಿರುದ್ಧ ನಡೆಸುವ ಹೋರಾಟ. ಸಂಕ್ಷಿಪ್ತವಾಗಿ ಹೇಳುವುದಾದರೆ ಶಕ್ತಿಯ ಪ್ರಯೋಗದ ಮೂರು ಮಟ್ಟಗಳಿರ ಬಹುದು. ವೈಯಕ್ತಿಕ, ಸಾಮೂಹಿಕ ಮತ್ತು ಸರಕಾರಿ.

## ವೈಯಕ್ತಿಕ

ಇಸ್ಲಾಮ್ ಪ್ರತಿಯೊಬ್ಬ ವ್ಯಕ್ತಿಗೆ ಆಯುಧ ಎತ್ತುವ ಅನುಮತಿ ನೀಡುವುದಿಲ್ಲ. ಆದರೆ ಯಾರಾದರೂ ಒಬ್ಬ ವ್ಯಕ್ತಿ ಆಕ್ರಮಣಕ್ಕೆ ತುತ್ತಾದರೆ ಅವನಿಗೆ ಆಕ್ರಮಣಕಾರಿಯ ವಿರುದ್ಧ ಆತ್ಮರಕ್ಷಣೆಗಾಗಿ ಶಕ್ತಿಯನ್ನು ಪ್ರಯೋಗಿಸುವ ಅಧಿಕಾರವಿದೆ. ಆಕ್ರಮಣಕಾರಿಯು ವ್ಯಕ್ತಿಯಾಗಿರಲಿ ಅಥವಾ ವರ್ಗವಾಗಿರಲಿ. ಇದು ವ್ಯಕ್ತಿಯ ಆತ್ಮರಕ್ಷಣೆಯ ಹಕ್ಕಾಗಿದೆ. ಶರೀಅತ್ ಇದನ್ನು ಮಾನ್ಯ ಮಾಡುತ್ತದೆ. ಆದರೆ ಇದು ಆಕ್ರಮಣದ ವಿರುದ್ಧ ಆತ್ಮರಕ್ಷಣೆಯ ಹಕ್ಕಾಗಿದೆ. ಇದನ್ನು ಆಕ್ರಮಣದ ವಿರುದ್ಧ ಆಕ್ರಮಣದ ಹಕ್ಕು ಎಂದು ತಿಳಿಯಬಾರದು. ಮರ್ದಿತನಿಗೂ ಆಕ್ರಮಣ ಮಾಡುವ ಅನುಮತಿಯಿಲ್ಲ ಅಥವಾ ತಾನೇ ನ್ಯಾಯಾಧೀಶನಾಗಿ ತನ್ನ ಮೇಲೆ ಆದ ಅನ್ಯಾಯಕ್ಕೆ ಪ್ರತೀಕಾರ ಪಡೆಯುವ ಹಕ್ಕಿಲ್ಲ. ಪ್ರತೀಕಾರ ಪಡೆಯಲು ಅವನು ನ್ಯಾಯಾಲಯದ ನೆರವು ಪಡೆಯಬೇಕು. ನ್ಯಾಯಾಲಯವು ಅವನಿಗೆ ಆದ ಅನ್ಯಾಯಕ್ಕೆ ಸಮಾನವಾದ ಪ್ರತೀಕಾರವನ್ನು ಅವನಿಗೆ ಕೊಡಿಸುವುದು. ಇದು ಕೇವಲ ಮುಸ್ಲಿಮ್ ರಾಷ್ಟ್ರಗಳ ಕ್ರಮವಲ್ಲ. ಕಾನೂನಿನ ಆಳ್ವಿಕೆಯಿರುವ ಮುಸ್ಲಿಮೇತರ ರಾಷ್ಟ್ರಗಳಲ್ಲೂ ಈ ಕ್ರಮವನ್ನೇ ಕೈಗೊಳ್ಳಲಾಗುತ್ತದೆ.

ಜಟಿಲ ಕಾನೂನು ಪ್ರಕ್ರಿಯೆಯ ಕಾರಣ ಕೆಲವೊಮ್ಮೆ ನ್ಯಾಯ ಸಿಗುವಾಗ ತಡವಾಗುವ ಸಾಧ್ಯತೆಯಿದೆ. ಕೆಲವೆಡೆ ಕಾನೂನು ಪ್ರಕ್ರಿಯೆಯು ರಾಜಕೀಯ ಪಕ್ಷಪಾತ ಪೀಡಿತ ವಾಗಿರುವ ಸಾಧ್ಯತೆಯೂ ಇರಬಹುದು. ಆದರೆ ಅದು ಕೇವಲ ಅಪವಾದವಾಗಿರ ಬಹುದೇ ಹೊರತು ನಿಯಮವಲ್ಲ. ಆದ್ದರಿಂದ ವ್ಯಕ್ತಿಯು ಕಾನೂನಿನ ಮೇಲುಗೈಯನ್ನು ಒಪ್ಪಿಕೊಂಡು ಪ್ರತೀಕಾರ ಅಥವಾ ನ್ಯಾಯಕ್ಕಾಗಿ ಅದನ್ನೇ ಅವಲಂಬಿಸಬೇಕು. ಯಾವನಾದರೂ ವ್ಯಕ್ತಿ ಇದಕ್ಕೆ ಸಿದ್ಧವಿಲ್ಲದಿದ್ದರೆ ಅವನಿಗೆ ಅದಕ್ಕಿಂತಲೂ ಹೆಚ್ಚಿನ ಅನ್ಯಾಯವನ್ನು ಎದುರಿಸಬೇಕಾದೀತು. ಇದು ಆಕ್ರಮಣಕಾರಿಯ ಆಕ್ರಮಣ ಮುಗಿದು ಕಾನೂನು ನೆರವು ಪಡೆಯುವ ಹಂತ ಮುಂದಿಲ್ಲದ ಪರಿಸ್ಥಿತಿಯಾಗಿದೆ. ಆದರೆ ಆಕ್ರಮಣ ನಡೆಯುತ್ತಿರುವಾಗ ತನ್ನ ರಕ್ಷಣೆ ಮಾಡಿಕೊಳ್ಳುವ ಹಕ್ಕು ಅವನಿಗಿದೆ. ಒಂದು ವೇಳೆ ಆತ್ಮರಕ್ಷಣೆಯಲ್ಲಿ ಆಕ್ರಮಣಕಾರಿಯು ಸತ್ತು ಹೋದರೂ ಆ ಕೊಲೆಯು ಕ್ಷಮಾರ್ಹ ವಾಗಿದೆ. ಆದರೆ ಇದು ಆಕ್ರಮಣ ಜಾರಿಯಲ್ಲಿರುವ ತನಕ ಮಾತ್ರ ಇರುವ ಹಕ್ಕಾಗಿದೆ. ಒಂದು ವೇಳೆ ಅವನು ಅಥವಾ ಮೂರನೆಯ ವ್ಯಕ್ತಿಯೊಬ್ಬನು ಆಕ್ರಮಣಕಾರಿಯನ್ನು ಆಕ್ರಮಣದಿಂದ ತಡೆಯುವಲ್ಲಿ ಯಶಸ್ವಿಯಾದರೆ ಆತ್ಮರಕ್ಷಣೆಯ ಈ ಹಕ್ಕು ಕೂಡಾ ಅನೂರ್ಜಿತಗೊಳ್ಳುತ್ತದೆ. ಆಕ್ರಮಣಕಾರಿಯನ್ನು ಕೊಂದು ಬಿಡುವ ಉದ್ದೇಶದಿಂದ ಅವನ ವಿರುದ್ಧ ಕಾರ್ಯಾಚರಿಸುವುದು ಸರಿಯಲ್ಲ. ಉದಾ: ಯಾರಾದರೂ ಅನ್ಯಾಯವಾಗಿ

ಒಬ್ಬನ ಕೆನ್ನೆಗೆ ಹೊಡೆದಿದ್ದರೆ ಅದರ ಬದಲಾಗಿ ಬಂದೂಕಿನಿಂದ ಗುಂಡು ಹಾರಿಸುವ ಅಧಿಕಾರ ಆತನಿಗಿಲ್ಲ.

ಆತ್ಮರಕ್ಷಣೆಗಾಗಿ ಆಕ್ರಮಣಕಾರಿಯ ಪ್ರಾಣಹರಣ ಮಾಡುವ ಸಾಧ್ಯತೆಯಿರುವ ಕಡೆಯಲ್ಲಿ ಕರ್ಮಶಾಸ್ತ್ರ ವಿದ್ವಾಂಸರು ಅದಕ್ಕೆ ಮೇರೆಗಳನ್ನು ನಿಶ್ಚಯಿಸಿದ್ದಾರೆ. ಆಕ್ರಮಣಕಾರಿಯು ಒಬ್ಬನ ಪ್ರಾಣ, ಸೊತ್ತು, ಮಾನ ಮತ್ತು ವಿಶ್ವಾಸದ ಮೇಲೆ ಆಕ್ರಮಣ ಮಾಡಿದರೆ ಆತ್ಮರಕ್ಷಣೆಗಾಗಿ ಆತನನ್ನು ಕೊಲ್ಲಬಹುದಾಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

ಯಾರು ತನ್ನ ಸೊತ್ತಿನ ರಕ್ಷಣೆಯ ವೇಳೆ ಕೊಲ್ಲಲ್ಪಡುತ್ತಾನೋ ಅವನು ಹುತಾತ್ಮನಾಗಿದ್ದಾನೆ. ಯಾರು ತನ್ನ ಪ್ರಾಣದ ರಕ್ಷಣೆಯ ವೇಳೆ ಕೊಲ್ಲಲ್ಪಡುತ್ತಾನೋ ಅವನು ಹುತಾತ್ಮನಾಗಿದ್ದಾನೆ. ಯಾರು ತನ್ನ ಧರ್ಮದ ರಕ್ಷಣೆಯ ವೇಳೆ ಕೊಲ್ಲಲ್ಪಡುತ್ತಾನೋ ಅವನು ಹುತಾತ್ಮನಾಗಿದ್ದಾನೆ. ಯಾರು ತನ್ನ ಮನೆಯವರ ರಕ್ಷಣೆಯ ವೇಳೆ ಕೊಲ್ಲಲ್ಪಡುತ್ತಾನೋ ಅವನು ಹುತಾತ್ಮನಾಗಿದ್ದಾನೆ. (ಅಬೂದಾವೂದ್)

ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

"ಅಕ್ರಮವಾಗಿ ವಧಿಸಲ್ಪಟ್ಟವನ ವಾರೀಸುದಾರನಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡಿರುತ್ತೇವೆ." (17:33)

ಆತ್ಮರಕ್ಷಣೆಯಲ್ಲಿ ಶಕ್ತಿಯನ್ನು ಪ್ರಯೋಗಿಸುವ ಈ ಹಕ್ಕನ್ನು ಸಮಾಜದ ಪರಿಸ್ಥಿತಿಯನ್ನು ನೋಡಿ ಉಪಯೋಗಿಸಬೇಕು. ಒಂದು ವೇಳೆ ಅಶಾಂತಿ, ಗಲಭೆ-ಗೊಂದಲಗಳು ಹರಡಿದ್ದು ಇಂತಹ ಸಂದರ್ಭದಲ್ಲಿ ಯಾರದಾದರೂ ಪ್ರಾಣವನ್ನು ತನ್ನ ಆತ್ಮರಕ್ಷಣೆಗಾಗಿ ಹರಣ ಮಾಡಿದರೆ ಕ್ಷೋಭೆಯು ಮತ್ತಷ್ಟು ವ್ಯಾಪಿಸುವ ಆಶಂಕೆಯಿದ್ದರೆ ತನ್ನ ಆತ್ಮರಕ್ಷಣೆಗೆ ಆಯುಧ ಎತ್ತಬೇಕೋ ಅಥವಾ ಇನ್ನಾವುದೇ ರೀತಿಯಲ್ಲಿ ಆತನನ್ನು ಎದುರಿಸಬೇಕೋ ಎಂಬುದನ್ನು ನಿರ್ಣಯಿಸಬೇಕು. ಸಾಮಾಜಿಕ ಅಶಾಂತಿಯ ಕುರಿತು ಬಂದಿರುವ ಪ್ರವಾದಿ ವಚನದಿಂದ ತಿಳಿಯುವುದೇನೆಂದರೆ ನೈಜ ಉದ್ದೇಶ ಕ್ಷೋಭೆಯನ್ನು ನಿವಾರಿಸುವುದಾಗಿದೆ. ಅಂತಹ ಸಂದರ್ಭದಲ್ಲಿ ಪ್ರಾಣಹರಣ ಮಾಡಿದರೆ ಅಶಾಂತಿ ಇನ್ನೂ ವ್ಯಾಪಿಸುವ ಸಾಧ್ಯತೆಯಿರುವುದರಿಂದ ತನ್ನ ಪ್ರಾಣ ಹೋದರೂ ಆತನನ್ನು ಕೊಲ್ಲದಿರುವುದೇ ಉತ್ತಮ. ಆದರೆ ಶಾಂತಿಯ ಸ್ಥಿತಿಯಲ್ಲಿ ಇಂತಹ ಕಿಡಿಗೇಡಿಗಳೊಂದಿಗೆ ಮೃದು ಧೋರಣೆ ತಾಳಿದರೆ ಅದು ಕ್ಷೋಭೆಯನ್ನು ಹರಡುವುದಕ್ಕೆ ಕಾರಣವಾಗುತ್ತದೆ. ಆದ್ದರಿಂದ ಸಾಮಾನ್ಯ ಪರಿಸ್ಥಿತಿಯಲ್ಲಿ ತನ್ನ ಮೇಲೆ ಆಗುವ ಆಕ್ರಮಣವನ್ನು ತಡೆಯಬೇಕು.

ಮಿಶ್ರ ಸಮಾಜದಲ್ಲಿಯೂ ಇಂತಹ ಪರಿಸ್ಥಿತಿ ಉಂಟಾಗಬಹುದು. ಉದಾ: ಧಾರ್ಮಿಕ ಪಕ್ಷಪಾತದ ಕಾರಣ ಅಶಾಂತಿ ಹರಡಿದ್ದರೆ ಯಾವನೇ ಆಕ್ರಮಣಕಾರಿಯ ಆಕ್ರಮಣಕ್ಕೆ ಪ್ರತಿಯಾಗಿ ಆತನನ್ನು ಕೊಂದರೆ ಅಶಾಂತಿ ಮತ್ತಷ್ಟು ವ್ಯಾಪಿಸುವ ಸಾಧ್ಯತೆಯಿರುತ್ತದೆ. ಆ ಆಕ್ರಮಣಕ್ಕೆ ಉತ್ತರ ನೀಡದೆ ಇದ್ದರೆ ಆಕ್ರಮಣಕಾರಿ ಜನರ

ನೈತಿಕ ಮತ್ತು ಭೌತಿಕ ಬೆಂಬಲವನ್ನು ಕಳೆದುಕೊಳ್ಳುವ ಸಾಧ್ಯತೆಯಿದೆ. ಅಂತಹ ಸಂದರ್ಭದಲ್ಲಿ ವ್ಯಕ್ತಿಯು ತನ್ನ ಜೀವದ ಬಲಿದಾನ ನೀಡಿಯೂ ಅಶಾಂತಿಯ ವಾತಾವರಣ ಹರಡುವುದನ್ನು ತಡೆಯಬೇಕು.

**ಸಾಮೂಹಿಕ**

ಸಾಮೂಹಿಕ ನೆಲೆಯಲ್ಲಿ ಶಕ್ತಿಯ ಪ್ರಯೋಗವೇನೆಂದರೆ ಮುಸ್ಲಿಮ್ ಸಮಾಜದಲ್ಲಿ ಒಂದು ವರ್ಗವು ಇನ್ನೊಂದು ವರ್ಗದೊಂದಿಗೆ ಜಗಳಕ್ಕಿಳಿಯುವುದು ಅಥವಾ ಮಿಶ್ರ ಸಮಾಜದಲ್ಲಿ ಮುಸ್ಲಿಮ್ ಮತ್ತು ಮುಸ್ಲಿಮೇತರರ ಮಧ್ಯೆ ಸಂಘರ್ಷ ಏರ್ಪಡುವುದು. ಎರಡೂ ಸಂದರ್ಭಗಳಲ್ಲಿ ಇಸ್ಲಾಮೀ ಶಿಕ್ಷಣದ ಪ್ರಕಾರ ಕೆಲವೊಮ್ಮೆ ಆಯುಧ ಎತ್ತದಿರಬೇಕು. ಇನ್ನು ಕೆಲವೊಮ್ಮೆ ಆಯುಧ ಎತ್ತದಿರುವುದು ಕಡ್ಡಾಯ ವಾಗುತ್ತದೆ. ವಿಶೇಷವಾಗಿ ಒಂದು ಮಿಶ್ರ ಸಮಾಜದಲ್ಲಿ ಮುಸ್ಲಿಮರು ಪರಸ್ಪರ ಸಂಘರ್ಷಕ್ಕಿಳಿಯುವ ಅನುಮತಿಯೇ ಇಲ್ಲ.

ಮುಸ್ಲಿಮ್ ಸಮಾಜದಲ್ಲಿ ಶರೀಅತ್‌ನ ಮಾನದಂಡಕ್ಕೆ ವಿರುದ್ಧವಾಗಿರುವ ಜನರ ಕೈಯಲ್ಲಿ ಅಧಿಕಾರ ಬಂದು ಬಿಡಬಹುದು. ಪ್ರವಾದಿ ವಚನದಿಂದ ತಿಳಿದು ಬರುವುದೇ ನೆಂದರೆ ಅವರನ್ನು ಅನುಸರಿಸಬೇಕು. ಅವರು ಅನ್ಯಾಯವೆಸಗಿದರೂ ಸಹಿಸಿಕೊಳ್ಳಬೇಕು. ಅವರು ವೈಯಕ್ತಿಕವಾಗಿ ಇಸ್ಲಾಮೀ ವಿಧಿಗಳನ್ನು ಪಾಲಿಸದಿದ್ದರೂ ಅವರ ವಿರುದ್ಧ ಬಂಡಾಯ ಹೂಡಬಾರದು. ಆದರೆ ಅವರು ಜನರನ್ನು ಧರ್ಮದ ಪ್ರಕಾರ ನಡೆಯುವುದ ರಿಂದಲೇ ತಡೆಯಲಾರಂಭಿಸಿದಾಗ ಅವರನ್ನು ಪದಚ್ಯುತಗೊಳಿಸಲು ಪ್ರಯತ್ನಿಸಬೇಕಾಗುತ್ತದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

"ನನ್ನ ಕಾಲಾನಂತರ ನೀವು ಸ್ವಾರ್ಥಗಳನ್ನು ಮತ್ತು ನಿಮಗೆ ಅಪ್ರಿಯವಾದ ವಿಷಯ ಗಳನ್ನು ನೋಡುವಿರಿ." ಜನರು ವಿಚಾರಿಸಿದರು, "ಆಗ ನಾವೇನು ಮಾಡಬೇಕೆಂದು ತಾವು ಆದೇಶಿಸುತ್ತೀರಿ?" ಅವರ ಹಕ್ಕುಗಳನ್ನು ತೀರಿಸಿರಿ ಮತ್ತು ನಿಮ್ಮ ಹಕ್ಕುಗಳನ್ನು ಅಲ್ಲಾಹನಲ್ಲಿ ಬೇಡಿರಿ" ಎಂದು ಪ್ರವಾದಿ(ಸ) ಹೇಳಿದರು. (ಬುಖಾರಿ)

ಈ ಪ್ರವಾದಿ ವಚನ ಮತ್ತು ಇಂತಹುದೇ ಇತರ ಪ್ರವಾದಿ ವಚನಗಳಿಂದ ತಿಳಿದು ಬರುವುದೇನೆಂದರೆ ಮುಸ್ಲಿಮ್ ಸಮುದಾಯದ ಉನ್ನತ ಹಿತಾಸಕ್ತಿ ಯಾವುದರಲ್ಲಿದೆ ಯೆಂದರೆ ಅವರು ತಮ್ಮ ಆಡಳಿತಗಾರರ ವಿರುದ್ಧ ಬಂಡಾಯ ಹೂಡಬಾರದು. ಅವರು ಅಕ್ರಮಿಗಳಾಗಿದ್ದರೂ ಸರಿಯೆ. ಅವರು ನಿಮ್ಮ ಧರ್ಮದ ಹಾದಿಯಲ್ಲಿ ತೊಡಕಾಗದಿರುವ ತನಕ ಅವರನ್ನು ಅನುಸರಿಸುತ್ತಿರಬೇಕು. ಆದರೆ ಅವರ ವಿರುದ್ಧ ಶಾಂತಿಯುತ ಹೋರಾಟ ಗಳನ್ನು ನಡೆಸಬಹುದು.

ಪ್ರವಾದಿಯವರ(ಸ) ಹೋರಾಟವು ನಿಜವಾಗಿ ಒಂದು ನಿರಾಯುಧ ಹೋರಾಟ ವಾಗಿತ್ತು. ಮಕ್ಕಾದಲ್ಲಿರುವ ತನಕ ಪ್ರವಾದಿ(ಸ) ಸಂದೇಶ ಪ್ರಚಾರ ಮಾಡುತ್ತಿದ್ದರು ಮತ್ತು ಯಾವುದೇ ಅನ್ಯಾಯಕ್ಕೆ ಪ್ರತೀಕಾರ ಮಾಡುತ್ತಿರಲಿಲ್ಲ. ಪ್ರವಾದಿಯವರ(ಸ) ಈ ಶಸ್ತ್ರ

ರಹಿತ ಹೋರಾಟದ ಪರಿಣಾಮವಾಗಿಯೇ ಮುಂದೆ ಮದೀನಾದಲ್ಲಿ ಒಂದು ಇಸ್ಲಾಮಿ ರಾಷ್ಟ್ರದ ಸ್ಥಾಪನೆಯಾಯಿತು.

ಇಸ್ಲಾಮಿ ಇತಿಹಾಸದಲ್ಲೂ ಇಂತಹ ಅನೇಕ ನಿದರ್ಶನಗಳಿವೆ. ಮೊಗಲ್ ಚಕ್ರವರ್ತಿ ಅಕ್ಬರನ 'ದೀನೆ ಇಲಾಹಿ'ಯ ವಿರುದ್ಧ ಶೇಖ್ ಅಹ್ಮದ್ ಸರ್‌ಹಿಂದಿಯವರು ಮಾಡಿದ ಶಾಂತಿಯುತ ಹೋರಾಟ ಮತ್ತು ಇರಾನ್‌ನ ಇಸ್ಲಾಮಿ ಕ್ರಾಂತಿ ಸಂಪೂರ್ಣ ನಿರಾಯುಧ ಹೋರಾಟಗಳಾಗಿದ್ದುವು.

ಮತ್ತೊಂದು ಸನ್ನಿವೇಶ ಮುಸ್ಲಿಮ್ ಮತ್ತು ಮುಸ್ಲಿಮೇತರರು ಜತೆಜತೆಗೆ ಇರುವುದಾಗಿದೆ. ಇಂತಹ ಬಹುಧರ್ಮೀಯ ಸಮಾಜದಲ್ಲಿ ಪರಸ್ಪರ ಆಯುಧ ಎತ್ತುವ ಅನುಮತಿ ಯಾರಿಗೂ ಇಲ್ಲ.

ಪ್ರವಾದಿಯವರ(ಸ) ಕಾಲದ ಮಕ್ಕಾದ ಸಮಾಜವು ಇಂತಹ ಬಹುಧರ್ಮೀಯ ಸಮಾಜವಾಗಿತ್ತು. ಆ ಸಮಾಜದಲ್ಲಿ ಬಹುದೇವವಿಶ್ವಾಸಿಗಳು, ಮುಸ್ಲಿಮರು ಮತ್ತು ಕೆಲವು ಕ್ರೈಸ್ತರು ಇದ್ದರು. ಅಲ್ಲಿ ಪ್ರವಾದಿಯವರ(ಸ) ಕಾರ್ಯವಿಧಾನ ಏನಿತ್ತೆಂದರೆ ಅವರು ಅಲ್ಲಿ ಶಾಂತಿಯುತ ಧರ್ಮ ಪ್ರಚಾರ ಕೈಗೊಂಡರು. ಅಲ್ಲಿ ಯಾರಿಗೂ ಆಯುಧ ಎತ್ತುವ ಅನುಮತಿ ಇರಲಿಲ್ಲ. ಮುಸ್ಲಿಮರ ಮೇಲೆ ಘೋರ ಅನ್ಯಾಯ-ಆಕ್ರಮಣಗಳು ನಡೆಯುತ್ತಿದ್ದುವು. ಅವರನ್ನು ಕೇವಲ ಸತ್ಯಧರ್ಮ ಸ್ವೀಕಾರದ ಕಾರಣ ದಿಂದ ಸತಾಯಿಸಲಾಗುತ್ತಿತ್ತು. ಆದರೆ ಎಲ್ಲ ಪರಿಸ್ಥಿತಿಯಲ್ಲೂ ಸಹನೆ ಮತ್ತು ತಾಳ್ಮೆಯನ್ನು ಕೈಗೊಳ್ಳಬೇಕೆಂದು ಅವರಿಗೆ ಆದೇಶಿಸಲಾಗಿತ್ತು. ಎಲ್ಲ ರೀತಿಯ ಪ್ರತೀಕಾರದಿಂದ ಅವರು ದೂರ ಉಳಿದರು. ಪ್ರವಾದಿಯವರ(ಸ) ಮೇಲೆ ವಿಶ್ವಾಸವಿಟ್ಟ ಕೆಲವು ಪ್ರಭಾವಶಾಲಿ ಸಂಗಾತಿಗಳು ಉದಾ: ಹ. ಉಮರ್ ಮತ್ತು ಹಮ್‌ಝಾರವರು(ರ) ಬಹುದೇವ ವಿಶ್ವಾಸಿಗಳ ಆಕ್ರಮಣಕ್ಕೆ ಸೂಕ್ತ ಉತ್ತರ ನೀಡಬೇಕೆಂದು ಬಯಸಿದ್ದರು. ಆದರೆ ಪ್ರವಾದಿ(ಸ) ಆಗಲೂ ಶಕ್ತಿಯ ಪ್ರಯೋಗದಿಂದ ಅವರನ್ನು ತಡೆದರು.

ಅನ್ಯಾಯ-ಆಕ್ರಮಣಗಳಿಗೆ ಸಹನೆ ಅವಲಂಬಿಸುವುದು ಪ್ರವಾದಿಯವರ(ಸ) ರೂಢಿಯಾಗಿತ್ತು. ಕೆಡುಕಿಗೆ ಒಳಿತಿನ ಉತ್ತರ ನೀಡಬೇಕೆಂದು ಅವರು ತಮ್ಮ ಅನುಯಾಯಿ ಗಳಿಗೆ ಕಲಿಸಿದ್ದರು.

ನಿಮ್ಮ ಮನಸ್ಸನ್ನು ಪಳಗಿಸಿರಿ. ಜನರು ನಿಮ್ಮ ಜತೆ ಉತ್ತಮ ವ್ಯವಹಾರ ಮಾಡಿದರೆ ನೀವೂ ಉತ್ತಮವಾಗಿ ವರ್ತಿಸಿರಿ. ಅವರು ಕೆಟ್ಟ ವರ್ತನೆ ತೋರಿದರೂ ನೀವು ಅನ್ಯಾಯವೆಸಗಬೇಡಿರಿ. (ತಿರ್ಮಿದಿ)

ಇದೇ ಅರ್ಥದ ಇನ್ನೊಂದು ಪ್ರವಾದಿ ವಚನ ಹೀಗಿದೆ:

ನಿನ್ನಿಂದ ಸಂಬಂಧ ಕಡಿದವನೊಂದಿಗೆ ನೀನು ಸಂಬಂಧ ಸ್ಥಾಪಿಸು. ನಿನ್ನ ಮೇಲೆ ಅನ್ಯಾಯ ಮಾಡಿದವನನ್ನು ಕ್ಷಮಿಸಿ ಬಿಡು ಮತ್ತು ನಿನ್ನ ಜತೆ ಕೆಟ್ಟದಾಗಿ ವರ್ತಿಸಿದವ ರೊಂದಿಗೆ ನೀನು ಉತ್ತಮವಾಗಿ ವರ್ತಿಸು.

ಪ್ರವಾದಿಯವರ(ಸ) ಸಂಪೂರ್ಣ ಜೀವನ ಕ್ಷಮೆ, ಸಹನೆ ಮತ್ತು ತಾಳ್ಮೆಯದ್ದಾಗಿತ್ತು. ಅಕ್ರಮಿಗಳು ಅನ್ಯಾಯ-ಅಕ್ರಮಗಳನ್ನು ಮುಗಿಲು ಮುಟ್ಟಿಸಿದರು. ಆದರೂ ಪ್ರವಾದಿ(ಸ) ಸಹನೆ-ಸಂಯಮಗಳ ಸಾಕಾರ ಮೂರ್ತಿಯಾಗಿದ್ದರು. ಅಕ್ರಮಿಗಳು ಹ. ಸುಮಯ್ಯಾರನ್ನು(ರ) ಕೊಂದು ಬಿಟ್ಟರು. ಆಗಲೂ ಪ್ರವಾದಿ(ಸ) ಯಾವುದೇ ನಕಾರಾತ್ಮಕ ಪ್ರತಿಕ್ರಿಯೆ ವ್ಯಕ್ತ ಪಡಿಸಲಿಲ್ಲ. ಯಾಸಿರ್ ಕುಟುಂಬಕ್ಕೆ ಸಹನೆಯನ್ನೇ ಬೋಧಿಸಿದರು-

'ಯಾಸಿರ್ ಕುಟುಂಬವೇ! ಸಹನೆ ಕೈಗೊಳ್ಳಿರಿ. ಖಂಡಿತ ನಿಮ್ಮ ವಾಸಸ್ಥಳ ಸ್ವರ್ಗವಾಗಿದೆ.'

(ಝಾದುಲ್ ಮಆದ್)

ಮಿಶ್ರ ಸಮಾಜದಲ್ಲಿ ಯುದ್ಧದ ಅನುಮತಿ ನೀಡಲಾಗದು ಎಂದು ಪ್ರವಾದಿಯವರ(ಸ) ಮಕ್ಕಾ ಜೀವನದ ಚರ್ಯೆಯಿಂದ ತಿಳಿದು ಬರುತ್ತದೆ. ಏಕೆಂದರೆ ಇದರಿಂದ ಧರ್ಮ ಪ್ರಚಾರದ ಮಾರ್ಗವು ಮುಚ್ಚಲ್ಪಡುವುದಲ್ಲದೆ ಬೇರಾವ ಪರಿಣಾಮವೂ ಆಗುವುದಿಲ್ಲ.

ಪ್ರಸಕ್ತ ಬಹುಧರ್ಮೀಯ ಸಮಾಜಗಳ ಸ್ಥಿತಿಯೂ ಅದುವೇ ಆಗಿದೆ. ನಮಗೆ ಪ್ರವಾದಿಯವರ(ಸ) ಮಕ್ಕಾ ಜೀವನದ ಚರ್ಯೆಯು ಅನುಕರಣೀಯವಾಗಿದೆ. ಈ ಬಗ್ಗೆ ಸಯ್ಯದ್ ಜಲಾಲುದ್ದೀನ್ ಉಮರಿಯವರು ಹೀಗೆ ಹೇಳಿರುವರು:

ಯಾವ ಮುಸ್ಲಿಮೇತರ ರಾಷ್ಟ್ರದಲ್ಲಿ ಧರ್ಮ ಪ್ರಚಾರದ ಅವಕಾಶವಿದ್ದು ಅಲ್ಲಿ ಸಂದೇಶ ಪ್ರಚಾರ ಕಾರ್ಯ ನಡೆಯುತ್ತಿದೆಯೋ ಮತ್ತು ಅದರ ಹಾದಿಯಲ್ಲಿ ಯಾವುದೇ ಅಸಹನೀಯ ಅಡೆ-ತಡೆಗಳಿಲ್ಲವೋ ಅಲ್ಲಿಂದ ವಲಸೆ (ಹಿಜ್ರತ್) ಮಾಡಲಿಕ್ಕೂ ಇಲ್ಲ ಮತ್ತು ಆ ರಾಷ್ಟ್ರದಲ್ಲಿ ಯುದ್ಧ (ಜಿಹಾದ್) ಹೂಡಲಿಕ್ಕೂ ಇಲ್ಲ. ಪ್ರವಾದಿಯವರ(ಸ) ಮೂಲಕ ಆದ ಮಹಾನ್ ಕ್ರಾಂತಿಯ ಆರಂಭ ಮಕ್ಕಾದಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಸಂದೇಶ ಪ್ರಚಾರದಿಂದಾಯಿತು. ಪ್ರವಾದಿಯವರು(ಸ) ವೈಯಕ್ತಿಕವಾಗಿಯೂ ಅಲ್ಲಾಹನ ಸಂದೇಶವನ್ನು ತಲುಪಿಸಿದರು ಮತ್ತು ಮಕ್ಕಾದ ಬೀದಿ-ಕೇರಿಗಳಲ್ಲಿಯೂ ಅದರ ಸ್ವರ ಮೊಳಗುತ್ತಿತ್ತು. ಮಕ್ಕಾದ ಜನರು ಸಂದೇಶ ಪ್ರಚಾರದ ಹಾದಿಯನ್ನು ಮುಚ್ಚಿ ಮಕ್ಕಾದಿಂದ ಪ್ರವಾದಿಯವರನ್ನು(ಸ) ಗಡೀಪಾರು ಮಾಡುವ ಅಥವಾ ಅವರ ಕೊಲೆಯ ತೀರ್ಮಾನ ಮಾಡುವ ತನಕ ಪ್ರವಾದಿ(ಸ) ಮದೀನಾಕ್ಕೆ ವಲಸೆ ಹೋಗಲಿಲ್ಲ ಮತ್ತು ಮಕ್ಕಾದಲ್ಲಿದ್ದುಕೊಂಡು ಅವರೊಂದಿಗೆ ಯುದ್ಧ ಮಾಡಲೂ ಇಲ್ಲ.

## ಸರಕಾರಿ

ಸರಕಾರದ ಮಟ್ಟದಲ್ಲಿ ಅಗತ್ಯ ಶರತ್ತುಗಳೊಂದಿಗೆ ಯುದ್ಧದ(ಜಿಹಾದ್) ಘೋಷಣೆ ಮಾಡುವುದು ಇಸ್ಲಾಮೀ ಸರಕಾರದ ಅಧಿಕಾರವಾಗಿತ್ತು. ಆ ಅಗತ್ಯ ಶರತ್ತುಗಳ ಪೈಕಿ ಕೆಲವು ಹೀಗಿವೆ:

1. ತನ್ನ ಜನತೆಯ ಮೇಲೆ ಪೂರ್ಣ ಅಧಿಕಾರ ಹೊಂದಿರುವ ಒಬ್ಬ ಅಮೀರ್‌ನ ನಾಯಕತ್ವದಲ್ಲೇ ಯುದ್ಧ ಮಾಡಬೇಕು.

2. ಅದು ಅಲ್ಲಾಹನ ಮಾರ್ಗದ ಯುದ್ಧವಾಗಿರಬೇಕು. ಅದರಲ್ಲಿ ಜನಾಂಗೀಯ, ಪ್ರಾದೇಶಿಕ, ರಾಷ್ಟ್ರೀಯ ಪಕ್ಷಪಾತವಾಗಲೀ ಸಂಪತ್ತು ಮತ್ತು ಅಧಿಕಾರದ ಗಳಿಕೆಯಾಗಲಿ ಉದ್ದೇಶವಾಗಿರಬಾರದು.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಅಲ್ಲಾಹನ ವಚನವು ಉನ್ನತವಾಗಬೇಕೆಂಬ ಉದ್ದೇಶದಿಂದ ಯಾರು ಜಿಹಾದ್ ಮಾಡುತ್ತಾನೋ ಅವನದು ಮಾತ್ರ ಅಲ್ಲಾಹನ ಮಾರ್ಗದ ಜಿಹಾದ್ ಆಗಿದೆ." (ಬುಖಾರಿ)

ಇನ್ನೊಂದು ಪ್ರವಾದಿ ವಚನದಲ್ಲಿ ಹೀಗೆ ಹೇಳಲಾಗಿದೆ:

ಯಾರು ಕೋಮು ಪಕ್ಷಪಾತಕ್ಕಾಗಿ ಹೋರಾಡುತ್ತಾನೋ ಅವನು ನಮ್ಮವನಲ್ಲ. ಯಾರು ಕೋಮು ಪಕ್ಷಪಾತಕ್ಕಾಗಿ ಸಾಯುತ್ತಾನೋ ಅವನೂ ನಮ್ಮವನಲ್ಲ.

(ಅಬೂದಾವೂದ್)

3. ಜಿಹಾದ್‌ಗೆ ಉದ್ದೇಶವಿರಬೇಕು. ಅರ್ಥಾತ್ ಶರೀಅತ್ ಯಾವ ಉದ್ದೇಶಗಳಿಗಾಗಿ ಸಶಸ್ತ್ರ ಜಿಹಾದ್‌ನ ಅನುಮತಿ ನೀಡಿದೆಯೋ ಅವುಗಳಿಗಾಗಿ ಮಾತ್ರ ಜಿಹಾದ್ ಮಾಡಬೇಕು ಮತ್ತು ಎಷ್ಟರ ತನಕ ಆ ಅನುಮತಿಯಿದೆಯೋ ಅಲ್ಲಿಯ ತನಕ ಮಾತ್ರ ಜಿಹಾದ್ ಮಾಡಬೇಕು.

4. ಜಿಹಾದ್‌ನಲ್ಲಿ ಯಾವುದೇ ಧರ್ಮಬಾಹಿರ ಕ್ರಮವನ್ನು ಅವಲಂಬಿಸಬಾರದು. ಈ ಶರತ್ತುಗಳೊಂದಿಗೆ ಇಸ್ಲಾಮಿ ಸರಕಾರವು ಅಕ್ರಮ-ಅನ್ಯಾಯಗಳ ವಿರುದ್ಧ, ಮರ್ದಿತ ಮುಸ್ಲಿಮರ ನೆರವಿಗಾಗಿ ಮತ್ತು ಸತ್ಯ ಧರ್ಮದ ಸ್ವೀಕಾರದ ಹಾದಿಯಲ್ಲಿರುವ ಅಡೆ-ತಡೆಗಳನ್ನು ನೀಗಿಸಲಿಕ್ಕಾಗಿ ಜಿಹಾದ್ ಮಾಡಬಹುದು. ಅಲ್ಲಾಹನು ಹೀಗೆ ಹೇಳಿರುವನು:

**"ಯಾರ ವಿರುದ್ಧ ಯುದ್ಧ ನಡೆಸಲಾಗುತ್ತಿದೆಯೋ ಅವರಿಗೆ ಅನುಮತಿ ನೀಡಲಾಗಿದೆ. ಏಕೆಂದರೆ ಅವರು ಮರ್ದಿತರು ಮತ್ತು ನಿಶ್ಚಯವಾಗಿಯೂ ಅಲ್ಲಾಹನು ಅವರಿಗೆ ಸಹಾಯ ಮಾಡಲು ಸಮರ್ಥನು. ಇವರು, 'ನಮ್ಮ ಪ್ರಭು ಅಲ್ಲಾಹ್' ಎಂದಿಷ್ಟೇ ಹೇಳಿದ ತಪ್ಪಿಗಾಗಿ ತಮ್ಮ ಮನೆಗಳಿಂದ ಅನ್ಯಾಯವಾಗಿ ಹೊರ ಹಾಕಲ್ಪಟ್ಟವರು." (ಪವಿತ್ರ ಕುರ್‌ಆನ್, 22:39-40)**

ಯಾವುದೇ ಆಕ್ರಮಣಕಾರಿ ಶಕ್ತಿಯು ಇಸ್ಲಾಮಿ ರಾಷ್ಟ್ರದ ಮೇಲೆ ದಾಳಿ ನಡೆಸಿದರೆ ಅವರೂ ತಮ್ಮ ರಕ್ಷಣೆಗಾಗಿ ಜಿಹಾದ್ ಹೂಡಬಹುದಾಗಿದೆ.

**"ನಿಮ್ಮೊಡನೆ ಯುದ್ಧ ಮಾಡುವವರೊಂದಿಗೆ ನೀವೂ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ. ಆದರೆ ಅತಿಕ್ರಮಿಸಬೇಡಿರಿ. ಅಲ್ಲಾಹನು ಅತಿಕ್ರಮಿಸುವವರನ್ನು ಮೆಚ್ಚುವುದಿಲ್ಲ." (ಪವಿತ್ರ ಕುರ್‌ಆನ್, 2:190)**

ಇವೆರಡೂ ರಕ್ಷಣಾತ್ಮಕ ಜಿಹಾದ್‌ನ ರೂಪಗಳು. ಇವುಗಳಲ್ಲಿ ಸಮನಾದ ಪ್ರತೀಕಾರಕ್ಕೆ ಅವಕಾಶವಿದೆಯೇ ಹೊರತು ಅತಿಕ್ರಮವೆಸಗುವಂತಿಲ್ಲ. ಆಕ್ರಮಣವು ಮನುಷ್ಯನ ಸ್ವಾತಂತ್ರ್ಯದ ವಿರುದ್ಧವಾಗಿರಲಿ, ಅವನ ಧರ್ಮ ಮತ್ತು ವಿಶ್ವಾಸದ ವಿರುದ್ಧವಾಗಿರಲಿ ಎರಡೂ

ರೂಪದಲ್ಲಿ ಅದು ಅಪರಾಧವಾಗಿದೆ. ಅದರಿಂದ ರಕ್ಷಣೆ ಮಾಡಿಕೊಳ್ಳುವುದು ಮಾನವನ ಮೂಲಭೂತ ಹಕ್ಕಾಗಿದೆ.

ಈ ಎರಡೂ ಸಂದರ್ಭಗಳಲ್ಲಿ ಜಿಹಾದ್‌ನ ಅನುಮತಿಯಿದೆಯಾದರೂ ಜಿಹಾದ್ ಹೂಡುವುದು ಕಡ್ಡಾಯವಲ್ಲ. ಯುದ್ಧವಿಲ್ಲದೆಯೇ ಉದ್ದೇಶ ಈಡೇರುವುದಾದರೆ ಮತ್ತು ಶೋಷಿತನಿಗೆ ಅವನ ಹಕ್ಕನ್ನು ಕೊಡಿಸಲು ಸಾಧ್ಯವಾಗುವುದಾದರೆ ಯುದ್ಧವನ್ನು ನಿವಾರಿಸುವುದು ಒಳ್ಳೆಯದು.

ಇವುಗಳಿಗೆ ಹೊರತಾಗಿ ಜಿಹಾದ್‌ನ ಇನ್ನೊಂದು ಸಂದರ್ಭವೂ ಇದೆ. ಎಲ್ಲಾದರೂ ಮುಸ್ಲಿಮರು ದುರ್ಬಲರಾಗಿದ್ದು ತಮ್ಮ ಧರ್ಮ ಮತ್ತು ನಂಬಿಕೆಯ ಕಾರಣ ಅನ್ಯಾಯ-ಅತ್ಯಾಚಾರಗಳಿಗೆ ಗುರಿಯಾಗುತ್ತಿದ್ದು ಒಂದು ಅಕ್ರಮಿ ಜನಾಂಗವು ಅವರ ಮೇಲೆ ಮುಗಿಬಿದ್ದು ಅವರ ಜೀವನವನ್ನು ದುಸ್ಸಹಗೊಳಿಸಿದ್ದರೆ ಇಂತಹ ಸಂದರ್ಭದಲ್ಲಿ ಅವರ ನೆರವಿಗೆ ಧಾವಿಸುವುದು ಇಸ್ಲಾಮೀ ರಾಷ್ಟ್ರದ ಮೇಲೆ ಕಡ್ಡಾಯವಾಗಿದೆ:

**"ಓ ನಮ್ಮ ಪ್ರಭೂ, ಅಕ್ರಮಿಗಳು ವಾಸಿಸುವ ಈ ನಾಡಿನಿಂದ ನಮ್ಮನ್ನು ಹೊರ ತೆಗೆ. ನೀನು ನಿನ್ನ ಕಡೆಯಿಂದ ನಮಗೊಬ್ಬ ಮೇಲ್ವಿಚಾರಕನನ್ನು ಮತ್ತು ಒಬ್ಬ ಸಹಾಯಕನನ್ನು ನಿಯೋಜಿಸು ಎಂದು ಮೊರೆಯಿಡುತ್ತಿರುವ ಮರ್ದನಕ್ಕೊಳಗಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗಾಗಿ, ನೀವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡದಿರಲು ಕಾರಣವೇನು?"** **(ಪವಿತ್ರ ಕುರ್‌ಆನ್, 4:75)**

ಈ ಸಹಾಯ ಕೂಡಾ ಯಾವ ರಾಷ್ಟ್ರದೊಂದಿಗೆ ಇಸ್ಲಾಮೀ ಸರಕಾರದ ಒಪ್ಪಂದ ವಿಲ್ಲವೋ ಆ ರಾಷ್ಟ್ರದ ಶೋಷಿತ ಮುಸ್ಲಿಮರಿಗೆ ಮಾತ್ರ ಮಾಡಲಾಗುವುದು. ಆ ರಾಷ್ಟ್ರದೊಂದಿಗೆ ಒಪ್ಪಂದವಿದ್ದರೆ ಅವರಿಗೆ ಯಾವುದೇ ಸಹಾಯ ನೀಡಲಾಗದು. ಬದಲಾಗಿ ಒಪ್ಪಂದವನ್ನು ಗೌರವಿಸುತ್ತಾ ತಮ್ಮ ಮುಸ್ಲಿಮ್ ಪ್ರಜೆಗಳ ಮೇಲೆ ಮಾಡುವ ದೌರ್ಜನ್ಯ ಗಳನ್ನು ನಿಲ್ಲಿಸುವಂತೆ ರಾಜತಾಂತ್ರಿಕ ಮಾಧ್ಯಮದಿಂದ ಅವರ ಮನವೊಲಿಸಲಾಗುವುದು.

ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

**"ಅವರು ಧರ್ಮ ಕಾರ್ಯದಲ್ಲಿ ನಿಮ್ಮಿಂದ ಸಹಾಯ ಕೋರಿದರೆ ಅವರಿಗೆ ಸಹಾಯ ಮಾಡಬೇಕಾದುದು ನಿಮ್ಮ ಮೇಲೆ ಕಡ್ಡಾಯ ವಾಗಿದೆ. ಆದರೆ, ಇದು ನಿಮ್ಮೊಂದಿಗೆ ಒಪ್ಪಂದಬದ್ಧ ಜನಾಂಗದ ವಿರುದ್ಧವಾಗಿರಬಾರದು."** **(8:72)**

ಇದಲ್ಲದೆ ಇನ್ನೊಂದು ಸನ್ನಿವೇಶ ಒಂದು ಅಕ್ರಮಿ ಸರಕಾರ ಅಥವಾ ಶಕ್ತಿಯು ತನ್ನ ಅಧೀನವಿರುವ ಜನರನ್ನು ಸತ್ಯಧರ್ಮ ಸ್ವೀಕರಿಸದಂತೆ ನಿಯಂತ್ರಣ ಹೇರು ವುದಾಗಿದೆ. ಈ ನಿಯಂತ್ರಣವನ್ನು ವಜಾಗೊಳಿಸಿ ಯಾವುದೇ ಧರ್ಮವನ್ನು ಸ್ವೀಕರಿಸುವ ಮಾನವೀಯ ಹಕ್ಕನ್ನು ಸ್ಥಾಪಿಸುವಂತೆ ಮಾಡಲು ಅವರ ವಿರುದ್ಧ ಯುದ್ಧ ಹೂಡಲು ಇಸ್ಲಾಮ್ ಅನುಮತಿ ನೀಡುತ್ತದೆ. ಮಿಥ್ಯ ಶಕ್ತಿಗಳ ಕಿರುಕುಳ ಇರುವ ತನಕ ಮಾತ್ರ ಸಶಸ್ತ್ರ ಜಿಹಾದ್ ಧರ್ಮಬದ್ಧವಾಗಿದೆ. ಕ್ಷೋಭೆಯ ಬೆಂಕಿ ತಣಿಯುತ್ತಲೇ ಜಿಹಾದ್ ಕೂಡಾ ಕೊನೆಗೊಳ್ಳುತ್ತದೆ. ಅಲ್ಲಾಹನು ಹೀಗೆ ಹೇಳಿರುವನು:

"ಕ್ಷೋಭೆಯು ಸಂಪೂರ್ಣ ಅಳಿದು ಹೋಗುವವರೆಗೂ ಧರ್ಮವು ಪರಿಪೂರ್ಣವಾಗಿ ಅಲ್ಲಾಹನಿಗೇ ಆಗುವವರೆಗೂ ನೀವು ಅವರ ವಿರುದ್ಧ ಹೋರಾಡಿರಿ. ಅನಂತರ ಅವರು ಹಿಮ್ಮೆಟ್ಟಿದರೆ, ಅಕ್ರಮಿಗಳ ಹೊರತು ಇನ್ನಾರ ಮೇಲೂ ಕೈಯೆತ್ತ ಬಾರದೆಂಬುದನ್ನು ನೀವು ತಿಳಿದಿರಬೇಕು." (ಪವಿತ್ರ ಕುರ್‌ಆನ್, 2:193)

ಕ್ಷೋಭೆಯು ಅಳಿದು ಆಕ್ರಮಣಕಾರರು ಸಂಧಾನಕ್ಕೆ ಬಂದಾಗ ಜಿಹಾದ್ ನಿಂತು ಹೋಗುತ್ತದೆ. ಈ ಕುರಿತು ಕೆಲವು ದೇವವಚನಗಳನ್ನು ನೋಡಿರಿ:

"ಇದು ಯುದ್ಧ ಮುಗಿಯುವ ತನಕ." (ಪವಿತ್ರ ಕುರ್‌ಆನ್, 47:4)

"ಶತ್ರುವು ಶಾಂತಿ-ಸಂಧಾನಗಳ ಕಡೆಗೆ ವಾಲಿದರೆ ನೀವೂ ಅದಕ್ಕೆ ಸಿದ್ಧರಾಗಿರಿ." (ಪವಿತ್ರ ಕುರ್‌ಆನ್, 8:61)

"ಆದುದರಿಂದ ಅವರು ನಿಮ್ಮ ವಿರುದ್ಧ ಯುದ್ಧ ಮಾಡದೆ ದೂರವುಳಿದು ಬಿಡುವುದಾದರೆ ಮತ್ತು ನಿಮ್ಮೆದುರು ಸಂಧಿ ಸಮಾಧಾನಗಳ ಹಸ್ತ ಚಾಚಿದರೆ ಅಲ್ಲಾಹನು ನಿಮಗೆ ಅವರ ಮೇಲೆ ಕೈ ಮಾಡುವ ಯಾವ ಮಾರ್ಗವನ್ನೂ ಇರಿಸಿರುವುದಿಲ್ಲ." (ಪವಿತ್ರ ಕುರ್‌ಆನ್, 4:90)

ಇಸ್ಲಾಮ್ ಅತ್ಯಂತ ಅನಿವಾರ್ಯ ಪರಿಸ್ಥಿತಿಯಲ್ಲಿ ಮಾತ್ರ ಸಶಸ್ತ್ರ ಹೋರಾಟಕ್ಕೆ ಅನುಮತಿ ನೀಡುತ್ತದೆ. ಆ ಪರಿಸ್ಥಿತಿ ಕೊನೆಗೊಳ್ಳುತ್ತಲೇ ಆ ಅನುಮತಿಯೂ ಕೊನೆ ಗೊಳ್ಳುತ್ತದೆ. ಪ್ರವಾದಿ(ಸ) ಮತ್ತು ಅವರ ಸಂಗಾತಿಗಳು ಯಾವಾಗಲೂ ಶಾಂತಿಗೆ ಯುದ್ಧಕ್ಕಿಂತ ಆದ್ಯತೆ ನೀಡಿದ್ದರು. ಪ್ರವಾದಿ(ಸ) ಯಾವಾಗಲೂ ಯುದ್ಧವನ್ನು ನಿವಾರಿಸಲು ಪ್ರಯತ್ನಿಸುತ್ತಿದ್ದರು.

ಶತ್ರುವಿನೊಂದಿಗೆ ಸಶಸ್ತ್ರ ಸಂಘರ್ಷದಿಂದ ದೂರವುಳಿಯಿರಿ. (ಬುಖಾರಿ)

ಹುದೈಬಿಯಾ ಸಂಧಿಯ ಉದಾಹರಣೆ ನಮ್ಮ ಮುಂದಿದೆ. ಅದು ಶಾಂತಿಯ ಸ್ಥಾಪನೆ ಮತ್ತು ಯುದ್ಧದ ನಿವಾರಣೆಗಾಗಿ ಶತ್ರುವಿನ ಪ್ರತಿಯೊಂದು ಬೇಡಿಕೆಯನ್ನು ಒಪ್ಪಿಕೊಂಡು ಜಾರಿಗೆ ತಂದಂತಹ ಒಪ್ಪಂದವಾಗಿದೆ. ಶತ್ರುಗಳು ವಿಧವಿಧವಾಗಿ ಶಾಂತಿಯ ಪ್ರಕ್ರಿಯೆಯನ್ನು ಕೆಡಿಸಲು ಪ್ರಯತ್ನಿಸಿದರು. ಅತ್ಯಂತ ನಾಚಿಕೆಯ ಮತ್ತು ಕಷ್ಟಕರ ಶರತ್ತುಗಳ ಮೇಲೆ ಈ ಒಪ್ಪಂದವು ಪೂರ್ಣ ಗೊಂಡಿತು. ಆಗಲೇ ಕುರೈಶರ ಅನ್ಯಾಯ ಅತ್ಯಾಚಾರಗಳಿಗೆ ಗುರಿಯಾದ ಓರ್ವ ಯುವಕ- ಅಬೂಜಂದಲ್ ಬಂದರು. ತಮ್ಮನ್ನು ಮಕ್ಕಾದ ಬಹುದೇವವಿಶ್ವಾಸಿಗಳ ಚಿತ್ರ ಹಿಂಸೆಗಳಿಂದ ಪಾರು ಮಾಡಬೇಕೆಂದು ಅವರು ಪರಿಪರಿಯಾಗಿ ಮನವಿ ಮಾಡಿದರು. ಆದರೆ ಮಕ್ಕಾದ ಜನರೊಂದಿಗೆ ಆದ ಒಪ್ಪಂದದ ಪ್ರಕಾರ ಅವರು ಅದನ್ನು ವಿರೋಧಿಸಿದರು. ಮುಸ್ಲಿಮರ ಪಾಲಿಗೆ ಇದು ಅತ್ಯಂತ ಭಾವನಾತ್ಮಕ ಸನ್ನಿವೇಶವಾಗಿತ್ತು. ಅವರು ಮತ್ತೊಮ್ಮೆ ಅತ್ಯಂತ ಸಹನಾಮಯ ಘಟ್ಟವನ್ನು ಎದುರಿಸಬೇಕಾಯಿತು. ಆದರೆ ಶಾಂತಿ ಸ್ಥಾಪನೆಗಾಗಿ ಮುಸ್ಲಿಮರು ಈ ಭಾರೀ ಮೌಲ್ಯವನ್ನು ಪಾವತಿಸಿದರು. ಆದರೆ ಮತ್ತೆ ಪರಿಸ್ಥಿತಿ ಎಷ್ಟು ಬದಲಾಯಿತೆಂದರೆ ಅವರಿಗೆ ಅದರಷ್ಟೇ ಮೌಲ್ಯ ದೊರೆತುದಲ್ಲ, ಬದಲಾಗಿ ಅತ್ಯಧಿಕ ಮೌಲ್ಯ ಸಿಕ್ಕಿತು.

ಈ ವಿವರಣೆಗಳಿಂದ ಇಸ್ಲಾಮಿನ ಜಿಹಾದ್‌ನ ಸ್ಥಾನಮಾನವೇನು ಮತ್ತು ಅದನ್ನು ಯಾವ ಪರಿಸ್ಥಿತಿಯಲ್ಲಿ ಯಾವ ಶರತ್ತುಗಳೊಂದಿಗೆ ಹೂಡಬಹುದೆಂಬುದು ವ್ಯಕ್ತವಾಯಿತು.

## ಭಯೋತ್ಪಾದನೆಯಲ್ಲ, ನೈತಿಕ ಕ್ರಾಂತಿ

ಲೋಕದ ವಿಭಿನ್ನ ಕ್ರಾಂತಿಗಳ ಇತಿಹಾಸವನ್ನು ಪರಿಶೀಲಿಸಿದಾಗ ಅವು ರಕ್ತದಿಂದ ಬರೆಯಲ್ಪಟ್ಟಿದೆಯೆಂದು ತಿಳಿದು ಬರುತ್ತದೆ. ದೊಡ್ಡದೊಡ್ಡ ಕ್ರಾಂತಿಯ ನಾಯಕರು ಮಾನವ ಶವಗಳು ಮತ್ತು ತಲೆಗಳನ್ನು ತುಳಿಯುತ್ತಾ ಸಾಗಿರುವರು. ಲೆಕ್ಕವಿಲ್ಲದಷ್ಟು ಆರ್ತನಾದಗಳು, ಚೀರಾಟ, ಚೀತ್ಕಾರ, ನರಳಾಟಗಳು ಮತ್ತು ಲಕ್ಷಗಟ್ಟಲೆ ಸಾವಿನ ನಂತರ ವಿಜಯೋತ್ಸವಗಳನ್ನು ಆಚರಿಸಿ ದೀಪಾಲಂಕಾರ ಮಾಡಲಾಯಿತು.

ಆದರೆ ಮಾನವ ಇತಿಹಾಸದಲ್ಲಿ ಒಂದು ಕ್ರಾಂತಿಯು ಅತ್ಯಂತ ಆಶ್ಚರ್ಯಕರವಾಗಿದೆ. ಅದು ಮಾನವನ ಸಂಸ್ಕೃತಿ ಮತ್ತು ಚರಿತ್ರೆಯ ದಿಕ್ಕನ್ನೇ ಬದಲಾಯಿಸಿತು. ಮಾನವನ ಜೀವನ ಶೈಲಿಯನ್ನು ಅಡಿಯಿಂದ ಮುಡಿತನಕ ಮಾರ್ಪಡಿಸಿತು. ಮಾನವನ ಮುಖವನ್ನು ಅಸಂಖ್ಯ ದೇವರುಗಳಿಂದ ಮತ್ತು ಯಜಮಾನರಿಂದ ಸರಿಸಿ ಕೇವಲ ಒಬ್ಬ ದೇವನ ಕಡೆಗೆ ತಿರುಗಿಸಿತು. ಆ ಕ್ರಾಂತಿಯಲ್ಲಾದ ರಕ್ತಪಾತ, ಮಾನವ ಪ್ರಾಣದ ಹರಣ, ವಿಧ್ವಂಸಕ ಕೃತ್ಯಗಳು ಮತ್ತು ನಾಶ-ನಷ್ಟಗಳನ್ನು ಲೆಕ್ಕಮಾಡಿದರೆ ಕೇವಲ ಕೆಲವೇ ಮನುಷ್ಯರು ಅದರಲ್ಲಿ ಹತರಾಗಿದ್ದು. ಉಳಿದ ಲಕ್ಷೋಪಲಕ್ಷ ಜನರು ಯಾವುದೇ ಒತ್ತಾಯ-ಬಲಾತ್ಕಾರಗಳಿಲ್ಲದೆ, ಹಿಂಸೆ ಮತ್ತು ಭಯಭೀತಿಗೊಳಿಸುವ ಯಾವುದೇ ಕ್ರಮವಿಲ್ಲದೆ ತಂಡೋಪತಂಡವಾಗಿ ಈ ಕಾರವಾನದಲ್ಲಿ ಸೇರುತ್ತಾ ಹೋದರು. ಅದು ಜೀವನದ ಮಾನವ ಪರ ಕಲ್ಪನೆಯನ್ನು ನೀಡುತ್ತಿತ್ತು. ಅದರ ದೃಷ್ಟಿಯಲ್ಲಿ ಎಲ್ಲ ಮನುಷ್ಯರೂ ಒಬ್ಬ ದೇವನ ಸೃಷ್ಟಿ, ಒಂದೇ ತಂದೆ-ತಾಯಿಯ ಮಕ್ಕಳು ಎಂಬ ನೆಲೆಯಲ್ಲಿ ಸಮಾನ ಗೌರವಾದರಗಳಿಗೆ ಪಾತ್ರವಾದವರಾಗಿದ್ದರು. ಆದ್ದರಿಂದ ಅವರೆಲ್ಲರೂ ಶಾಂತಿ-ಸಮಾಧಾನದ ಧ್ವಜವಾಹಕ ರಾಗುತ್ತಾ ಸಾಗುತ್ತಿದ್ದರು.

ಇಸ್ಲಾಮ್ ಯಾವುದೇ ಕ್ರಾಂತಿಗೆ ಹಿಂಸೆ ಮತ್ತು ರಕ್ತಪಾತದ ಅನುಮತಿ ನೀಡಲಿಲ್ಲ. ಅದು ಎಲ್ಲ ರೀತಿಯ ಕ್ರಾಂತಿಗಳಿಗೆ ಮಾನವನ ಮನವನ್ನು ಪರಿವರ್ತಿಸಬೇಕೆಂದು ಹೇಳಿತು. ಜನರ ಮನಸ್ಸು ಬದಲಾಗದಿದ್ದರೆ ಸಹನೆ-ಸಂಯಮಗಳೊಂದಿಗೆ ಅದಕ್ಕಾಗಿ ಪ್ರಯತ್ನಿಸುತ್ತಿರುವಂತೆ ಅದು ಆದೇಶಿಸಿತು. ಆದ್ದರಿಂದ ಪ್ರವಾದಿಯವರ(ಸ) ಮಕ್ಕಾ ಜೀವನದ 13 ವರ್ಷಗಳ ಹೋರಾಟದಲ್ಲಿ ತಮ್ಮ ಅನುಯಾಯಿಗಳ ಸಹಿತ ತರತರದ ಸತ್ವ ಪರೀಕ್ಷೆಗಳು ಮತ್ತು ಹಿಂಸೆ-ದೌರ್ಜನ್ಯಗಳ ಘಟನೆಗಳು ಎದುರಾದುವು. ಆದರೆ ಪವಿತ್ರ ಕುರ್‌ಆನ್ ಮತ್ತು ಪ್ರವಾದಿಯವರ(ಸ) ಆದೇಶವು ಧರ್ಮಪ್ರಚಾರ ಕಾರ್ಯವನ್ನು ಮುಂದುವರಿಸುವುದು ಮತ್ತು ಯಾವುದೇ ಹಿಂಸಾತ್ಮಕ ಆಕ್ರಮಣಕ್ಕೆ ಪ್ರತಿಯಾಗಿ ಹಿಂಸೆಯ ಮಾರ್ಗವನ್ನು ಅವಲಂಬಿಸದಿರುವುದಾಗಿತ್ತು. ಶಕ್ತಿಶಾಲಿ ಖುರೈಶರು ಮುಸ್ಲಿಮರ ವಿರುದ್ಧ ಎಷ್ಟು ಅನ್ಯಾಯ-ಅತ್ಯಾಚಾರಗಳನ್ನು ಎಸಗಿದರೂ ಸರಿಯೆ. ಹಿಂಸೆ ತಾಳಲಾರದ ಸಂಗಾತಿಗಳಿಗೆ

ಪ್ರವಾದಿಯವರು(ಸ) ಇಥಿಯೋಪಿಯಾ ಮತ್ತು ಮದೀನಾಕ್ಕೆ ವಲಸೆ ಹೋಗುವ ಅನುಮತಿ ನೀಡಿದರು. ಆದರೆ ಕುರೈಶರ ಮೇಲೆ ಪ್ರತ್ಯಾಕ್ರಮಣ ಮಾಡುವ ಅನುಮತಿ ನೀಡಲಿಲ್ಲ. ಆಗ ಕುರೈಶರ ಆಕ್ರಮಣವು ಸಾಮಾಜಿಕ, ಆರ್ಥಿಕ ಬಹಿಷ್ಕಾರ, ದಿಗ್ಬಂಧನ, ಚಿತ್ರ ಹಿಂಸೆ ಮತ್ತು ಕೊಲೆಯ ತನಕವೂ ಮುಟ್ಟಿತ್ತು. ಆದರೆ ಪ್ರವಾದಿ(ಸ) ಅತ್ಯಂತ ಸಹನೆ ಮತ್ತು ತಾಳ್ಮೆಯಿಂದ ಸಂದೇಶ ಪ್ರಚಾರ ಕಾರ್ಯ ಮಾಡುತ್ತಿದ್ದರು. ಜನರನ್ನು ಒಳಿತಿನ ಕಡೆಗೆ ಆಹ್ವಾನಿಸುತ್ತಿದ್ದರು. ಕೆಡುಕಿನಿಂದ ಅವರನ್ನು ತಡೆಯುತ್ತಿದ್ದರು. ಕಟ್ಟಕಡೆಗೆ ಈ ವೈಚಾರಿಕ ಕ್ರಾಂತಿಯು ತನ್ನ ಗುರಿಯನ್ನು ಮುಟ್ಟಿತು. ಮನುಷ್ಯರ ಒಂದು ದೊಡ್ಡ ವಿಭಾಗವು ಬಹಿರಂಗವಾಗಿ ಸತ್ಯ ಧರ್ಮದ ಬೆಂಬಲಕ್ಕೆ ನಿಲ್ಲದಿದ್ದರೂ ಪ್ರವಾದಿಯವರ(ಸ) ಮಹಾನತೆ ಮತ್ತು ಅವರ ಸತ್ಯಸಂಧತೆಗೆ ಮನ ಸೋತಿತು. ಅವರಲ್ಲಿ ಪ್ರವಾದಿ(ಸ) ಮತ್ತು ಅವರ ಸಂಗಾತಿಗಳ ಬಗ್ಗೆ ಸಹಾನುಭೂತಿ ಮೂಡ ತೊಡಗಿತು. ಆಡಳಿತ ವರ್ಗ ಮತ್ತು ಕಿಡಿಗೇಡಿಗಳು ತಮ್ಮೆಲ್ಲ ಕಾರ್ಯಾಚರಣೆಗಳ ಹೊರತಾಗಿಯೂ ಜನಬೆಂಬಲವನ್ನು ಕಳೆದುಕೊಳ್ಳ ತೊಡಗಿದುವು. ಕುರೈಶರು ಪ್ರವಾದಿಯವರ(ಸ) ಕೊಲೆಗೆ ಸಂಚು ಹೂಡಿದ್ದು ಮತ್ತು ಪ್ರವಾದಿಯವರು(ಸ) ಯಶಸ್ವಿಯಾಗಿ ಮದೀನಾಕ್ಕೆ ವಲಸೆ ಹೋದದ್ದು ಅವರಿಗೆ ವಿರೋಧಿಗಳ ಮೇಲೆ ದೊರೆತ ಅತಿ ದೊಡ್ಡ ವಿಜಯವಾಗಿತ್ತು. ಆ ಕಾಲದಲ್ಲಿ ಅವತೀರ್ಣಗೊಂಡ ಕುರ್‌ಆನ್ ವಚನಗಳಲ್ಲಿ ಪದೇಪದೇ ಸಹನೆಯ ಉಪದೇಶ ಮಾಡಲಾಗುತ್ತಿತ್ತು-

"ನಿಮ್ಮ ಪ್ರಭುವಿನ ನಾಮವನ್ನು ಸ್ಮರಿಸುತ್ತಲಿರಿ ಮತ್ತು ಎಲ್ಲರಿಂದಲೂ ಬೇರ್ಪಟ್ಟು ಕೇವಲ ಅವನಿಗೆ ಸೇರಿದವರಾಗಿರಿ. ಅವನು ಪೂರ್ವ ಪಶ್ಚಿಮಗಳ ಒಡೆಯನು. ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ಆದ್ದರಿಂದ ಅವನನ್ನೇ ನಿಮ್ಮ ಕಾರ್ಯ ಸಾಧಕನಾಗಿ ಮಾಡಿ ಕೊಳ್ಳಿರಿ ಮತ್ತು ಜನರು ಆಡುತ್ತಿರುವ ಮಾತುಗಳ ಬಗ್ಗೆ ತಾಳ್ಮೆ ವಹಿಸಿರಿ ಮತ್ತು ಸಭ್ಯ ರೀತಿಯಿಂದ ಅವರಿಂದ ಬೇರ್ಪಡಿರಿ. ಸತ್ಯವನ್ನು ತಿರಸ್ಕರಿಸುವ ಈ ಸ್ಥಿತಿವಂತರೊಂದಿಗೆ ವ್ಯವಹರಿಸುವ ಕಾರ್ಯವನ್ನು ನೀವು ನನಗೆ ಬಿಟ್ಟು ಬಿಡಿರಿ ಮತ್ತು ಇವರನ್ನು ಸ್ವಲ್ಪ ಕಾಲ ಇದೇ ಸ್ಥಿತಿಯಲ್ಲಿ ಇರಲು ಬಿಡಿರಿ." (73:8-11)

"ಆದುದರಿಂದ ಸಂದೇಶವಾಹಕರೇ! ತಾಳ್ಮೆ ವಹಿಸಿರಿ. ಅಲ್ಲಾಹನ ವಾಗ್ದಾನವು ಪರಮ ಸತ್ಯವಾಗಿದೆ. ನಿಮ್ಮ ತಪ್ಪಿನ ಬಗ್ಗೆ ಕ್ಷಮೆ ಯಾಚಿಸಿರಿ ಮತ್ತು ಬೆಳಗು ಬೈಗುಗಳಲ್ಲಿ ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನನ್ನು ಸ್ತುತಿಸುತ್ತಿರಿ." (ಪವಿತ್ರ ಕುರ್‌ಆನ್, 40:55)

"ಮಗನೇ, ನಮಾಝನ್ನು ಸಂಸ್ಥಾಪಿಸು. ಒಳಿತಿನ ಆದೇಶ ಕೊಡು, ಕೆಡುಕಿನಿಂದ ತಡೆ ಮತ್ತು ಯಾವ ಕಷ್ಟವೇ ಬರಲಿ, ಸಹನೆ ವಹಿಸು. ಇವು ಅತಿ ಹೆಚ್ಚು ತಾಕೀತು ಮಾಡಲ್ಪಟ್ಟ ವಿಷಯಗಳು." (ಪವಿತ್ರ ಕುರ್‌ಆನ್, 31:17)

ಮಕ್ಕಾದಲ್ಲಿ ಪ್ರವಾದಿ(ಸ) ಅವರು ತಮ್ಮ ಸಂಗಾತಿಗಳಲ್ಲಿ ಮೂಲಭೂತ ನೈತಿಕ ಮೌಲ್ಯಗಳನ್ನು ಉದ್ದೀಪನಗೊಳಿಸಲು ಮತ್ತು ಇಸ್ಲಾಮಿನ ಕೇಂದ್ರೀಯ ನಂಬಿಕೆಯಾದ ಏಕದೇವತ್ವದ ಮೂಲಕ ಅದನ್ನು ಇನ್ನಷ್ಟು ಸ್ಫುಟಗೊಳಿಸಲು ಪ್ರಯತ್ನಿಸುತ್ತಿದ್ದರು.

ತನ್ಮೂಲಕ ಅವರು ಪ್ರತಿಯೊಂದು ಸತ್ವಪರೀಕ್ಷೆಯ ಘಟ್ಟದಲ್ಲಿ ಸ್ಥಿರಚಿತ್ತರಾಗಿದ್ದು ಸಹನೆ-ತಾಳ್ಮೆಯೊಂದಿಗೆ ಅವುಗಳನ್ನು ಸಹಿಸುತ್ತಾ ವಿಜಯದ ಕಡೆಗೆ ಪಯಣಿಸುವಂತಾಯಿತು.

ಲೌಕಿಕ ನಾಯಕತ್ವವನ್ನು ಅಲ್ಲಾಹನು ಭೌತಿಕ ಮತ್ತು ನೈತಿಕ ಶಕ್ತಿಯನ್ನು ಹೊಂದಿದವರಿಗೆ ನೀಡುತ್ತಾನೆಂಬುದು ಒಂದು ವಾಸ್ತವಿಕತೆ. ಆದರೆ ಇದರಲ್ಲಿ ಪ್ರಾಕೃತಿಕ ಮೂಲಗಳು, ಬಾಹ್ಯ ಕಾರಣಗಳು ಮತ್ತು ಭೌತಿಕ ಸಾಧನಗಳಿಗಿಂತ ಹೆಚ್ಚು ನಿರ್ಣಾಯಕ ಪಾತ್ರ ನೈತಿಕ ಶಕ್ತಿ ವಹಿಸುತ್ತದೆ.

ಇಸ್ಲಾಮ್ ಮಾನವನ ಮೂಲಭೂತ ನೈತಿಕ ಶಕ್ತಿಯನ್ನು ಸೀಮಿತ ವಲಯಗಳಿಂದ ಹೊರ ತೆಗೆದು ವಿಶ್ವವ್ಯಾಪಿಯಾಗಿ ಮಾರ್ಪಡಿಸುತ್ತದೆ. ಅದರಲ್ಲಿನ ಶಕ್ತಿಯನ್ನು ಸಹಸ್ರ ಪಟ್ಟು ಹೆಚ್ಚಿಸುತ್ತದೆ. ಮೂಲಭೂತ ಮಾನವೀಯ ನೈತಿಕತೆಯಲ್ಲಿ ಲೋಕದಲ್ಲಿ ಮಾನವನ ಯಶಸ್ಸಿಗೆ ಅನಿವಾರ್ಯ ಶರತ್ತಿನಂತಹ ಎಲ್ಲ ಗುಣಗಳೂ ಸೇರಿವೆ. ಉದ್ದೇಶ ಸರಿಯಾಗಿರಲಿ, ತಪ್ಪಾಗಿರಲಿ ಒಬ್ಬ ವ್ಯಕ್ತಿ ಅಥವಾ ಒಂದು ವರ್ಗ ಈ ಗುಣಗಳನ್ನು ಮೈಗೂಡಿಸಿಕೊಂಡರೆ ಅದು ಯಶಸ್ವಿಯಾಗುವುದು ಖಂಡಿತ. ಸಂಕಲ್ಪ ಶಕ್ತಿ, ನಿರ್ಣಯ ಶಕ್ತಿ, ಧೈರ್ಯ-ಸ್ಥೈರ್ಯ, ಸಹನೆ-ಸಂಯಮ, ಸ್ಥಿರಚಿತ್ತತೆ ಮತ್ತು ತಾಳ್ಮೆ, ಶೌರ್ಯ ಮತ್ತು ಪರಾಕ್ರಮ, ಜಾಗೃತಿ, ಪ್ರಯತ್ನಶೀಲತೆ, ಉದ್ದೇಶದೊಂದಿಗೆ ಪ್ರೀತಿ ಮತ್ತು ಅದಕ್ಕಾಗಿ ತ್ಯಾಗ ಮನೋಭಾವ, ವ್ಯವಹಾರ ಕುಶಲತೆ, ಚಿಂತನ ಶೀಲತೆ, ಕರ್ತವ್ಯ ಪ್ರಜ್ಞೆ, ಪರಿಸ್ಥಿತಿಯನ್ನರಿತು ಅದರಂತೆ ವರ್ತಿಸುವ ಸಾಮರ್ಥ್ಯ, ಭಾವನೆ ಮತ್ತು ಬಯಕೆಗಳ ಮೇಲೆ ಹತೋಟಿ, ಇತರರನ್ನು ಒಲಿಸುವ ಸಾಮರ್ಥ್ಯ- ಇವು ಆ ಮೂಲಭೂತ ಮಾನವೀಯ ನೈತಿಕತೆಯಾಗಿದೆ. ಇವುಗಳ ಹೊರತು ಮನುಷ್ಯನು ಕೇವಲ ಭೌತಿಕ ಸಾಧನಗಳ ಬಲದಿಂದ ಜಗತ್ತಿನಲ್ಲಿ ಮೇಲುಗೈ ಸಾಧಿಸಲಾರನು.

ಲೋಕದ ಅನೇಕ ಕ್ರಾಂತಿಗಳು ಈ ಗುಣಗಳ ಆಧಾರದಲ್ಲೇ ಬಂದಿವೆ. ಇವುಗಳ ಹೊರತು ಹಿಂಸೆಯಾಗಲಿ, ಭಯೋತ್ಪಾದನೆಯಾಗಲಿ ಫಲಕಾರಿಯಾಗದು. ಸಯ್ಯದ್ ಮೌದೂದಿಯವರ ಮಾತಿನಲ್ಲಿ, "ಮನುಷ್ಯನ ಘನತೆ ಮತ್ತು ನಂಬಿಕೆ ಯಾವ ಸಭ್ಯ ಗುಣಗಳ ಮೇಲೆ ನಿಂತಿದೆಯೋ ಮತ್ತು ಯಾವುದು ಸದಾ ಒಂದು ನಿರ್ಣಾಯಕ ಶಕ್ತಿಯಾಗಿರುತ್ತದೋ ಅವು ಸ್ವಾಭಿಮಾನ, ಔದಾರ್ಯ, ಕರುಣೆ, ಸಹಾನುಭೂತಿ, ನ್ಯಾಯ, ವಿಶಾಲ ಹೃದಯ, ವಿಶಾಲ ದೃಷ್ಟಿ, ಸತ್ಯ, ಪ್ರಾಮಾಣಿಕತೆ, ವಚನಪಾಲನೆ, ಮಾನವೀಯತೆ, ನ್ಯಾಯ, ಶಿಷ್ಟಾಚಾರ, ನೈರ್ಮಲ್ಯ, ಬುದ್ಧಿಯ ಸಂಸ್ಕಾರ, ಶರೀರದ ಸಂಸ್ಕಾರ ಮತ್ತು ಹೊಂದಾಣಿಕೆ- ಈ ಗುಣಗಳ ಮೂಲಕ ಒಬ್ಬ ವ್ಯಕ್ತಿ ಜಗತ್ತಿನಲ್ಲಿ ಯಾವುದೇ ಮಹತ್ಕಾರ್ಯವನ್ನು ಸಾಧಿಸ ಬಲ್ಲವನಾಗುತ್ತಾನೆ. ಆದರೆ ಇಸ್ಲಾಮ್ ಬಯಸುವಂತಹ ಸತ್ಕ್ರಾಂತಿಗೆ ಕೇವಲ ಈ ಗುಣಗಳು ಸಾಲವು. ಇದಕ್ಕಿಂತಲೂ ಮಿಗಿಲಾದ ಕೆಲವು ಗುಣಗಳು ಮಾನವನಲ್ಲಿ ಇರಬೇಕಾದುದು ಅನಿವಾರ್ಯವಾಗಿದೆ." ಈ ಗುಣಗಳು ಮನುಷ್ಯನ ಮೂಲಭೂತ ಮಾನವೀಯ ನೈತಿಕತೆಗೆ ಒಂದು ನೈಜ ಕೇಂದ್ರವನ್ನು ಒದಗಿಸುತ್ತವೆ ಮತ್ತು

ಅವನು ಆಮೂಲಾಗ್ರವಾಗಿ ಒಳಿತಾಗುತ್ತಾನೆ. ಇಸ್ಲಾಮ್ ಈ ಗುಣಗಳ ಕೇಂದ್ರವೆಂದು ಏಕದೇವ ವಿಶ್ವಾಸವನ್ನು ಸಾರಿದೆ. ಅದು ಮಾನವನನ್ನು ತನ್ನ ಚಿತ್ತ, ಕುಟುಂಬ, ಜನಾಂಗ ಮತ್ತು ರಾಷ್ಟ್ರದ ಏಳಿಗೆಯ ಬದಲು ಅಪ್ಪಟ ಸತ್ಯದ ಏಳಿಗೆಗಾಗಿ ಕಾರ್ಯ ನಿರತಗೊಳಿಸುತ್ತದೆ. ಇದರಿಂದ ಅವನ ಕಾರ್ಯಕ್ಷೇತ್ರ ಬಹಳ ವಿಶಾಲವಾಗುತ್ತದೆ. ಅವನು ಇಡೀ ಲೋಕದ ಪಾಲಿಗೆ ಒಳಿತು ಮತ್ತು ಕರುಣೆಯಾಗುತ್ತಾನೆ. ಮೂಲಭೂತ ಮಾನವೀಯ ನೈತಿಕ ಗುಣಗಳು ಏಕದೇವ ವಿಶ್ವಾಸದೊಂದಿಗೆ ಸೇರಿ ಸೀಮಾತೀತವಾಗಿ ಬಿಡುತ್ತವೆ. ಇಸ್ಲಾಮ್ ಸಹನೆಯನ್ನು ಮನುಷ್ಯನ ಸಂಪೂರ್ಣ ಜೀವನದಲ್ಲಿ ಹರಡಿ ಬಿಡುತ್ತದೆ. ಅದನ್ನು ಕೇವಲ ಕೆಲವು ವಿಶಿಷ್ಟ ರೀತಿಯ ಅಪಾಯ ಮತ್ತು ಕಷ್ಟಗಳನ್ನು ಎದುರಿಸಲು ಮಾತ್ರವಲ್ಲ ಮನುಷ್ಯನನ್ನು ನೇರ ಮಾರ್ಗದಿಂದ ದೂರ ಸರಿಸುವ ಎಲ್ಲ ಆಮಿಷ, ಬೆದರಿಕೆ, ಆಶಂಕೆ ಮತ್ತು ಆಸೆಯ ಮುಂದೆ ಸ್ಥಿರತೆಯ ಒಂದು ಅಪಾರ ಶಕ್ತಿಯಾಗಿ ಮಾರ್ಪಡಿಸುತ್ತದೆ.

ಒಟ್ಟಿನಲ್ಲಿ ಇಸ್ಲಾಮೀ ಚಿಂತನೆಯಲ್ಲಿ ಹಿಂಸೆ ಮತ್ತು ಭಯೋತ್ಪಾದನೆಗೆ ಯಾವುದೇ ಸ್ಥಾನವಿಲ್ಲ. ಅದರ ಮೂಲಕ ಯಾವುದೇ ಕ್ರಾಂತಿ ತರುವ ಕಲ್ಪನೆಯೇ ಅಲ್ಲಿಲ್ಲ. ಈ ಕ್ರಾಂತಿಯು ಭೌತಿಕ ಸಾಧನೆಗಳ ಜತೆಗೆ ನೈತಿಕ ಮೇಲ್ಮೆ ಸಾಧಿಸುವ ಮೂಲಕ ಮಾತ್ರ ಬರುತ್ತದೆ. ಮನಸ್ಸನ್ನು ಅಧೀನಗೊಳಿಸುವ ಪ್ರಯತ್ನಕ್ಕೆ ಅಲ್ಲಿ ಪ್ರಥಮ ಸ್ಥಾನವಿದೆ. ಸಯ್ಯದ್ ಮೌದೂದಿಯವರ ಮಾತಿನಲ್ಲಿ, "ಮನಸ್ಸು ಕೇವಲ ಕೆಲವು ಸುಂದರ ತತ್ವ ಗಳಿಂದ ಅಧೀನಗೊಳ್ಳುವುದಿಲ್ಲ. ಅದನ್ನು ಅಧೀನಗೊಳಿಸಲು ನೈಜ ಅನುಕಂಪ, ಸದುದ್ದೇಶ, ಪ್ರಾಮಾಣಿಕತೆ, ನಿಸ್ವಾರ್ಥತೆ, ಔದಾರ್ಯ, ವಿಶಾಲ ಮನಸ್ಸು, ಸಹಾನುಭೂತಿ, ಸಭ್ಯತೆ ಮತ್ತು ನ್ಯಾಯವಿರಬೇಕು. ಈ ಗುಣಗಳು ಯುದ್ಧ-ಶಾಂತಿ, ಸೋಲು-ಗೆಲುವು, ಗೆಳೆತನ-ಹಗೆತನ ಮುಂತಾದ ಎಲ್ಲ ಸ್ಥಿತಿಗಳ ಕಠಿಣ ಸತ್ವಪರೀಕ್ಷೆಗಳಲ್ಲಿ ಅಪ್ಪಟವೆಂದು ಸಾಬೀತಾಗಬೇಕು. ಇವು ಉತ್ತಮ ನೈತಿಕತೆಯ ಉನ್ನತ ಗುರಿಯೊಂದಿಗೆ ಸಂಬಂಧಿಸಿವೆ. ಅದರ ಸ್ಥಾನವು ಮೂಲಭೂತ ನೈತಿಕತೆಗಳಿಂದ ಬಹಳ ಉನ್ನತವಾಗಿದೆ."

**(ಇಸ್ಲಾಮೀ ಆಂದೋಲನದ ನೈತಿಕ ಬುನಾದಿಗಳು, ಪುಟ: 31)**

ಕೇವಲ ಭೌತಿಕ ಸಾಧನಗಳು ಮತ್ತು ಕೆಲವು ಮೂಲಭೂತ ನೈತಿಕತೆಯ ಆಧಾರದಲ್ಲಿ ಯಾವ ಶಕ್ತಿಗಳು ವಿಜಯ ಗಳಿಸುತ್ತವೆಯೋ ಅವು ರಾಷ್ಟ್ರೀಯತೆ, ಜನಾಂಗೀಯತೆ, ಪ್ರಾಂತೀಯತೆ ಮತ್ತು ಭೌತಿಕ ಹಿತಾಸಕ್ತಿಗಳ ವೃತ್ತದಿಂದ ಹೊರ ಬರುವುದಿಲ್ಲ. ಅವು ಸಾಮಾನ್ಯವಾಗಿ ವೈಯಕ್ತಿಕ, ವರ್ಗೀಯ ಮತ್ತು ರಾಷ್ಟ್ರೀಯ ಸ್ವಾರ್ಥಕ್ಕೆ ಬಲಿಯಾಗುತ್ತವೆ. ಅವರು ಮಾನವೀಯ ಹಕ್ಕುಗಳು, ಸಮಾನತೆ, ಮಾನವ ಘನತೆ ಗಳನ್ನು ಪೋಷಿಸುತ್ತಾರೆ. ಆದರೆ ಅಗತ್ಯ ಬಿದ್ದಾಗ ಅವರು ಎಲ್ಲ ರೀತಿಯ ಅನೈತಿಕ ಉಪಾಯಗಳನ್ನು ಕೈಗೊಳ್ಳುತ್ತಾರೆ. ಅವು ಸತ್ಯ, ವಚನ ಪಾಲನೆ, ಉತ್ತಮ ವ್ಯವಹಾರ, ನಿಷ್ಪಕ್ಷಪಾತಿ ನ್ಯಾಯ, ಪ್ರಾಮಾಣಿಕತೆಗಳನ್ನು ಕೈಬಿಟ್ಟು ಎಲ್ಲ ರೀತಿಯ ವಂಚನೆ, ಮೋಸ ಮತ್ತು ಕುತಂತ್ರಗಳ ಮೂಲಕ ತಮ್ಮ ಉದ್ದೇಶಗಳನ್ನು ಸಾಧಿಸಿಕೊಳ್ಳುತ್ತವೆ.

ಇಂದು ಜಗತ್ತಿನಲ್ಲಿ ಎರಡು ವಿಧದ ರಾಷ್ಟ್ರಗಳಿವೆ. ಒಂದೆಡೆ ರಾಜವಂಶ, ಸರ್ವಾಧಿಕಾರಿ ಶಾಸಕರು ಮತ್ತು ಲಷ್ಕರಿ ಆಡಳಿತಗಾರರಿದ್ದಾರೆ. ತಮ್ಮ ಆಡಳಿತವನ್ನು ಸಂರಕ್ಷಿಸುವುದರ ಜತೆಗೆ ಜನತೆಯ ಏಳಿಗೆ ಮತ್ತು ಸಾಮಾನ್ಯ ನೈತಿಕತೆಯ ಅಭಿವೃದ್ಧಿಗೂ ಅವರು ಏನಾದರೂ ಮಾಡುತ್ತಿರುತ್ತಾರೆ. ಇನ್ನೊಂದೆಡೆ ಪ್ರಜಾಸತ್ತೆಯಿರುವ ರಾಷ್ಟ್ರಗಳಿವೆ. ಅಲ್ಲಿ ತಮ್ಮ ವಿಚಾರವನ್ನು ಮಂಡಿಸುವ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಬಳಸುವ, ರಾಜಕೀಯ ವಾತಾವರಣವನ್ನು ಪರಿವರ್ತಿಸುವ ಮತ್ತು ಆಡಳಿತವನ್ನು ಬದಲಾಯಿಸಲು ಶಾಂತಿಯುತವಾಗಿ ಹೋರಾಡುವ ಅನುಮತಿಯಿದೆ. ಈ ಎರಡೂ ವಿಧದ ರಾಷ್ಟ್ರಗಳಲ್ಲಿ ಹಿಂಸೆ ಮತ್ತು ಭಯೋತ್ಪಾದನೆಯ ಮೂಲಕ ಸಣ್ಣ ಪುಟ್ಟ ವಿಜಯವನ್ನು ತಾತ್ಕಾಲಿಕವಾಗಿ ಗಳಿಸಬಹುದು. ಆದರೆ ದೂರಗಾಮಿ ಮತ್ತು ಶಾಶ್ವತ ಬದಲಾವಣೆಯು ಇದರ ಮೂಲಕ ಅಸಂಭವವಾಗಿದೆ. ಪ್ರಜಾಸತ್ತಾತ್ಮಕ ದೇಶಗಳಲ್ಲಂತೂ ಈ ರೀತಿಯ ಚಟುವಟಿಕೆಗಳು ಸಂಕುಚಿತ ದೃಷ್ಟಿಕೋನ ಮತ್ತು ದೂರದರ್ಶಿತ್ವದ ಕೊರತೆಯಾಗಿದೆ. ಅದರಿಂದ ನಷ್ಟದ ಹೊರತು ಬೇರೇನೂ ಅವರಿಗೆ ದಕ್ಕುವುದಿಲ್ಲ. ಭಾರತವನ್ನೇ ನೋಡಿ, ಇಲ್ಲಿ ನಕ್ಸಲೈಟ್ ಮತ್ತು ಮಾವೋವಾದಿಗಳು ದೀರ್ಘಕಾಲದಿಂದ ಹಿಂಸೆ, ವಿಧ್ವಂಸಕ ಕೃತ್ಯ ಮತ್ತು ಭಯೋತ್ಪಾದನೆಯಲ್ಲಿ ತೊಡಗಿದ್ದಾರೆ. ಆದರೆ ಅವರಿಗೆ ಅದರಿಂದ ಯಾವ ಯಶಸ್ಸೂ ದಕ್ಕಲಿಲ್ಲ. ತದ್ವಿರುದ್ಧವಾಗಿ ಆರೆಸ್ಸೆಸ್ 75 ವರ್ಷಗಳ ನಿರಂತರ ಪ್ರಯತ್ನಗಳಿಂದ ತನ್ನ ಕಾರ್ಯಕರ್ತರ ತ್ಯಾಗ, ಬಲಿದಾನ, ಅರ್ಪಣಾ ಮನೋಭಾವಗಳ ಮೂಲಕ, ತನ್ನ ಸಿದ್ಧಾಂತಗಳನ್ನು ಜನರ ಮನದಲ್ಲಿ ಬಿತ್ತುವ ಮೂಲಕ ಅವರು ಅಧಿಕಾರದ ಗದ್ದುಗೆಯನ್ನು ತಲುಪಿದರು. ಆ ಸಿದ್ಧಾಂತ ಎಷ್ಟು ವಿಚ್ಛಿದ್ರಕಾರಿ, ಅಸಹಜ ಮತ್ತು ವರ್ತಮಾನ ಕಾಲದ ಒಲವಿಗೆ ವಿರುದ್ಧವಾಗಿದ್ದರೂ ಸರಿಯೆ.

ಈ ಅರ್ಪಣಾ ಮನೋಭಾವ ಮತ್ತು ತ್ಯಾಗ ಬಲಿದಾನಗಳೊಂದಿಗೆ ನೈತಿಕ ಮೇಲ್ಮೆಯ ಮಟ್ಟಕ್ಕೆ ತಲುಪಿ ಹೋರಾಟ ಮಾಡಿದರೆ ಅದರ ಪರಿಣಾಮ ಖಂಡಿತ ಇದಕ್ಕಿಂತ ಉತ್ತಮವಾಗಿರುವುದು ಮತ್ತು ಇದಕ್ಕಿಂತ ಶೀಘ್ರವಾಗಿ ಲಭಿಸುವುದು.

ಒಟ್ಟಿನಲ್ಲಿ ಇಸ್ಲಾಮ್ ಎಂದೂ ಭಯೋತ್ಪಾದನೆ ಮತ್ತು ಹಿಂಸೆಯ ಅನುಮತಿ ನೀಡಲಿಲ್ಲ ಎಂಬುದಕ್ಕೆ ಅದರ ಇತಿಹಾಸ, ಪರಂಪರೆ ಮತ್ತು ಅದರ ಪ್ರಕೃತಿಯು ಸಾಕ್ಷ್ಯ ವಹಿಸುತ್ತದೆ. ಲೋಕದಲ್ಲಿ ಅದು ಸಾಧಿಸಿದಂತಹ ಮಹಾನ್ ಕ್ರಾಂತಿಯನ್ನು ತನ್ನ ನೈತಿಕ ಶಕ್ತಿಯ ಬಲದಿಂದಲೇ ಸಾಧಿಸಿತು. ಅದನ್ನು ನಾವು ಸತ್ಕ್ರಾಂತಿ ಮತ್ತು ಶಾಂತಿಯುತ ಕ್ರಾಂತಿ ಎನ್ನಬಹುದು.

ಜ್ಞ ಜ್ಞ ಜ್ಞ